| | | |
|---|---|---|
| **ಈ)** | ಈ ಬೆಟ್ಟದಲ್ಲಿ ಹಾಗೂ ದೇವಸ್ಥಾನದ ಹತ್ತಿರ ಮೂಲಭೂತ ಸೌಲಭ್ಯಗಳಾದ ಶೌಚಾಲಯ, ಬೀದಿ ದೀಪಗಳ ವ್ಯವಸ್ಥೆ, ಪಾದಚಾರಿ ರಸ್ತೆ ನಿರ್ವಹಣೆಗೆ ಪ್ರಸಕ್ತ ಸಾಲಿನಲ್ಲಿ ಅನುದಾನ ಹಂಚಿಕೆ ಮಾಡಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; | ಪ್ರಸಕ್ತ ಆರ್ಥಿಕ ಸಾಲಿನಲ್ಲಿ ಬಂಡವಾಳ ವೆಚ್ಚಗಳ ಲೆಕ್ಕಶೀರ್ಷಿಕೆ ಅಡಿಯಲ್ಲಿ ರೂ.35.00 **ಕೋಟಿ** ಅನುದಾನ ಮಾತ್ರ ಒದಗಿಸಿದ್ದು, ಮುಂದುವರೆದು ಕಾಮಗಾರಿಗಳಿಗೆ ಈ ಅನುದಾನವನ್ನು ವಿನಿಯೋಗಿಸಬೇಕಾಗಿರುವುದರಿಂದ, ಯಾವುದೇ ಹೊಸ ಯೋಜನೆ ಕೈಗೆತ್ತಿಕೊಳ್ಳಲು ಕಷ್ಟಸಾಧ್ಯವಾಗುತ್ತದೆ. |
| **ಉ)** | ರಾಜ್ಯದಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗೆ ಯಾವ ಯಾವ ಹೊಸ ಯೋಜನೆಗಳನ್ನು ರೂಪಿಸಲಾಗಿದೆ; ಇದರ ಅನುಷ್ಠಾನ ಯಾವಾಗ ಪ್ರಾರಂಭವಾಗುವುದು? | |

ಸಂಖ್ಯೆ: ಟಿಒಆರ್ 246 ಟಿಡಿವಿ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯ ಮಂತ್ರಿ.

ಕರ್ನಾಟಕ ಸರ್ಕಾರ

ಸಂಖ್ಯೆ: ಪಿಡಿಎಸ್ 92 ಕೆಎಲ್ಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:08.11.2020.

ಇವರಿಂದ

**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,**
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ,
ಬೆಂಗಳೂರು.

ಇವರಿಗೆ

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ,
ವಿಧಾನ ಸೌಧ,
ಬೆಂಗಳೂರು.

08
415
8/12/2020

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)–ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:364ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ರವರ ಪತ್ರ ದಿನಾಂಕ:02.12.2020.

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)–ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:364ಕ್ಕೆ ಉತ್ತರವನ್ನು ಸಿದ್ಧಪಡಿಸಿ ಈ ಪತ್ರಕ್ಕೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

ನಿರ್ದೇಶಕರು,
ಎಡಿಬಿ ವಿಭಾಗ,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**ಪ್ರತಿ ಮಾಹಿತಿಗಾಗಿ:**

1. ಮಾನ್ಯ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಆಪ್ತ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| 1). ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 364 |
| 2). ಸದಸ್ಯರ ಹೆಸರು | : | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) |
| 3). ಉತ್ತರಿಸುವ ದಿನಾಂಕ | : | 08.12.2020 |
| 4). ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2018-19 ಹಾಗೂ 2019-20ನೇ ಸಾಲಿನಲ್ಲಿ ಬಿಡುಗಡೆ ಮಾಡಲಾದ ಒಟ್ಟು ಅನುದಾನವೆಷ್ಟು:</td><td>ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ 2018-19 ಮತ್ತು 2019-20ನೇ ಸಾಲಿನಲ್ಲಿ ಬಿಡುಗಡೆಯಾದ ಅನುದಾನದ ವಿವರಗಳು ಈ ಕೆಳಗಿನಂತ್ತಿವೆ:-<br>(ರೂ.ಕೋಟಿಗಳಲ್ಲಿ)
<table>
<tr><th>ಕ್ರ.ಸಂ</th><th>ವರ್ಷ</th><th>ಬಿಡುಗಡೆಯಾದ ಅನುದಾನ</th></tr>
<tr><td>1</td><td>2018-19</td><td>481.69</td></tr>
<tr><td>2</td><td>2019-20</td><td>299.67</td></tr>
</table></td></tr>
<tr><td>(ಆ)</td><td>ಸದರಿ ಅನುದಾನದಲ್ಲಿ ಬಿಡುಗಡೆಗೆ ಬಾಕಿ ಇರುವ ಕಂತುಗಳ ಸಂಖ್ಯೆ ಹಾಗೂ ಒಟ್ಟು ಮೊತ್ತವೆಷ್ಟು;</td><td>ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ 2018-19 ಮತ್ತು 2019-20ನೇ ಸಾಲಿನಲ್ಲಿ ಬಿಡುಗಡೆಗೆ ಬಾಕಿ ಇರುವ ಕಂತುಗಳ ಸಂಖ್ಯೆಗಳ ವಿವರಗಳ ಈ ಕೆಳಗಿನಂತ್ತಿವೆ:-<br>(ರೂ.ಕೋಟಿಗಳಲ್ಲಿ)
<table>
<tr><th>ಕ್ರ.ಸಂ</th><th>ವರ್ಷ</th><th>ಕಂತುಗಳ ಸಂಖ್ಯೆ</th><th>ಬಾಕಿ ಇರುವ ಅನುದಾನ</th></tr>
<tr><td>1</td><td>2018-19</td><td>1</td><td>127.69</td></tr>
<tr><td>2</td><td>2019-20</td><td>2</td><td>303.91</td></tr>
</table></td></tr>
<tr><td>(ಇ)</td><td>ಸದರಿ ಅನುದಾನವನ್ನು ಇದುವರೆಗೂ ಬಿಡುಗಡೆ ಮಾಡದೇ ಬಾಕಿ ಉಳಿಸಿ ಕೊಂಡಿರುವುದಕ್ಕೆ ಕಾರಣವೇನು;</td><td>ಆರ್ಥಿಕ ಇಲಾಖೆಯ ಆದೇಶದಂತೆ ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿನ ಆರಂಭಿಕ ಶಿಲ್ಕು ಮತ್ತು ಬಿಡುಗಡೆಯಾಗಿರುವ ಅನುದಾನ ಸೇರಿ ಒಟ್ಟಾರೆ ಲಭ್ಯವಿರುವ ಅನುದಾನದಲ್ಲಿ ಶೇ 75 ರಷ್ಟು ವೆಚ್ಚವಾಗದೇ ಇರುವುದರಿಂದ ಉಳಿದ ಕಂತುಗಳನ್ನು ಬಿಡುಗಡೆಮಾಡಿರುವುದಿಲ್ಲ</td></tr>
<tr><td>(ಈ)</td><td>ಇದರಿಂದಾಗಿ ಈಗಾಗಲೇ ಕ್ರಿಯಾ ಯೋಜನೆಯನ್ನು ಸಲ್ಲಿಸಿರುವ ಪ್ರಕರಣಗಳಲ್ಲಿ ಅನಗತ್ಯ ವಿಳಂಬವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ</td><td>ಹೌದು.</td></tr>
<tr><td>ಉ</td><td>ಬಂದಿದಲ್ಲಿ ಬಿಡುಗಡೆಗೆ ಬಾಕಿ ಇರುವ ಅನುದಾನವನ್ನು ಯಾವ ಕಾಲಮಿತಿಯೊಳಗೆ ನಿರೀಕ್ಷಿಸಬಹುದಾಗಿದೆ?</td><td>ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಲ್ಲಿ ಫೆಬ್ರುವರಿ-2019ರ ಅಂತ್ಯಕ್ಕೆ ಉಳಿಕೆ ಹಣ ರೂ.830.67 ಕೋಟಿಗಳು ಇರುವುದರಿಂದ, ಜಿಲ್ಲಾಧಿಕಾರಿಗಳಿಗೆ 2019-20 ರಲ್ಲಿ ರೂ.2.00 ಕೋಟಿಯಂತೆ</td></tr>
</table>

|  |  | ಪ್ರತಿಯೊಬ್ಬರ ಶಾಸಕರ ಕ್ಷೇತ್ರಕ್ಕೆ ಕಾಮಗಾರಿಗಳನ್ನು ಅನುಮೋದಿಸಲು ಸರ್ಕಾರದ ಪತ್ರದ ಸಂಖ್ಯೆ:ಯೋಇ 487 ಪ್ರಕಾ 2019, ದಿನಾಂಕ:9.12.2019ರಲ್ಲಿ ಸೂಚಿಸಲಾಗಿದೆ. |
| --- | --- | --- |

ಸಂಖ್ಯೆ: ಪಿಡಿಎಸ್ 92 ಕೆಎಲ್ಎಸ್ 2020

(ಬಿ.ಎಸ್.ಯಡಿಯೂರಪ್ಪ),
ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಸನೀಇ 218 LAQ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, 2ನೇ ಮಹಡಿ,
ಬೆಂಗಳೂರು, ದಿನಾಂಕ:07.12.2020

09
U/S
08/12/2020

**ಇವರಿಂದ**
ಸರ್ಕಾರದ ಕಾರ್ಯದರ್ಶಿ,
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ
ವಿಕಾಸ ಸೌಧ, ಬೆಂಗಳೂರು

**ಇವರಿಗೆ**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ:- ಶ್ರೀ ಆಚಾರ್ ಹಾಲಪ್ಪ ಬಸಪ್ಪ., ಮಾನ್ಯ ವಿಧಾನಸಭೆ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:365ಕ್ಕೆ ಉತ್ತರಿಸುವ ಬಗ್ಗೆ

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ, ಶ್ರೀ ಆಚಾರ್ ಹಾಲಪ್ಪ ಬಸಪ್ಪ., ಮಾನ್ಯ ವಿಧಾನಸಭೆ ಸದಸ್ಯರು ಮಂಡಿಸಿರುವ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:365ರ ಉತ್ತರದ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ. ಮುಂದಿನ ಸೂಕ್ತ ಕ್ರಮ ಕೈಗೊಳ್ಳಲು ಈ ಮೂಲಕ ತಮಗೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

(ಎಂ.ಎಸ್.ಜ್ಯೋತಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ

## ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 365 |
| 2 | ಸದಸ್ಯರ ಹೆಸರು | : | ಶ್ರೀ ಆಚಾರ್ ಹಾಲಪ್ಪ ಬಸಪ್ಪ |
| 3 | ಉತ್ತರಿಸಬೇಕಾದ ದಿನಾಂಕ | : | 08.12.2020 |
| 4 | ಉತ್ತರಿಸುವವರು | : | ಸಣ್ಣ ನೀರಾವರಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಯಲಬುರ್ಗಾ ಜಿಲ್ಲೆಯಲ್ಲಿರುವ ಒಟ್ಟು ಸಣ್ಣ ನೀರಾವರಿ ಇಲಾಖೆಯ ಹಾಗೂ ಕಂದಾಯ ಕೆರೆಗಳ ಸಂಖ್ಯೆ ಎಷ್ಟು; | ಕೊಪ್ಪಳ ಜಿಲ್ಲೆಯಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ 122 ಕೆರೆಗಳಿರುತ್ತವೆ. ಕೆರೆಗಳ ಮಾಹಿತಿಯನ್ನು ಅನುಬಂಧ-1ರಲ್ಲಿ ನೀಡಲಾಗಿದೆ. ಕಂದಾಯ ಕೆರೆಗಳ ಮಾಹಿತಿಯು ಲಭ್ಯವಿರುವುದಿಲ್ಲ. |
| ಆ) | ಇವುಗಳಲ್ಲಿ ಕೊಪ್ಪಳ ಏತ ನೀರಾವರಿ ಯೋಜನೆಯ ವ್ಯಾಪ್ತಿಯಲ್ಲಿರುವ ಕೆರೆಗಳ ಸಂಖ್ಯೆ ಎಷ್ಟು; | ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತದಿಂದ ಕೈಗೊಳ್ಳಲಾದ ಕೊಪ್ಪಳ ಏತ ನೀರಾವರಿ ಯೋಜನೆಯ ವ್ಯಾಪ್ತಿಯಲ್ಲಿ ಸಣ್ಣ ನೀರಾವರಿ ಇಲಾಖೆಯ 12 ಕೆರೆಗಳಿರುತ್ತವೆ. |
| ಇ) | ಸದರಿ ನೀರಾವರಿ ಯೋಜನೆಯ ವ್ಯಾಪ್ತಿಯಲ್ಲಿರುವ ಕೆರೆಗಳ ಅಭಿವೃದ್ಧಿಗಾಗಿ ಸರ್ಕಾರ ರೂಪಿಸಿರುವ ಯೋಜನೆಗಳೇನು; | ಸದರಿ ಕೆರೆಗಳಲ್ಲಿ, ಬಳೂಟಗಿ ಕೆರೆ, ವಟಪರ್ವಿ ಕೆರೆ, ಬೇಣಕಲ್ ಕೆರೆ, ಮುರಡಿ ಕೆರೆ ಮತ್ತು ಮಲಕಸಮುದ್ರ ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |
| ಈ) | ಕಳೆದ ಎರಡು ವರ್ಷಗಳಲ್ಲಿ ಯಲಬುರ್ಗಾ ವಿಧಾನಸಭಾ ಕ್ಷೇತ್ರದಲ್ಲಿನ ಕೆರೆಗಳ, ಚೆಕ್ ಡ್ಯಾಮ್‌ಗಳ ಅಭಿವೃದ್ಧಿಗಾಗಿ ವಿನಿಯೋಗಿಸಿದ ಅನುದಾನವೆಷ್ಟು; | ಯಲಬುರ್ಗಾ ವಿಧಾನಸಭಾ ಕ್ಷೇತ್ರದಲ್ಲಿ ಕಳೆದ ಎರಡು ವರ್ಷಗಳಲ್ಲಿ ರೂ.1239.00ಲಕ್ಷ ಅಂದಾಜು ಮೊತ್ತದಲ್ಲಿ 12 ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ಇದುವರೆಗೆ ರೂ.100.00ಲಕ್ಷ ವೆಚ್ಚ ಮಾಡಲಾಗಿದೆ. ವಿವರಗಳನ್ನು ಅನುಬಂಧ-3ರಲ್ಲಿ ನೀಡಲಾಗಿದೆ. |
| ಉ) | ಮಳೆಯಾಶ್ರಿತ ಪ್ರದೇಶವಾಗಿರುವ ಯಲಬುರ್ಗಾ ಕ್ಷೇತ್ರದಲ್ಲಿ ಅಂತರ್ಜಲ ಮಟ್ಟವನ್ನು ಹೆಚ್ಚಿಸಲು ರೂಪಿಸಿಕೊಂಡ ಯೋಜನೆಗಳ ವಿವರಗಳನ್ನು ನೀಡುವುದು? | ಅಂತರ್ಜಲ ಮಟ್ಟ ಹೆಚ್ಚಿಸುವ ಸಲುವಾಗಿ ಸಣ್ಣ ನೀರಾವರಿ ಇಲಾಖೆಯಿಂದ ಕೈಗೊಳ್ಳಲಾಗುವ ಜಿನುಗು ಕೆರೆಗಳ ಮತ್ತು ಚೆಕ್‌ಡ್ಯಾಂಗಳ ನಿರ್ಮಾಣದಿಂದ ಅಂತರ್ಜಲ ಮಟ್ಟ ಹೆಚ್ಚಳವಾಗುವುದು. ವಿವಿಧ ಲೆಕ್ಕಶೀರ್ಷಿಕೆಗಳಡಿ ಒದಗಿಸಲಾಗಿರುವ ಅನುದಾನದಲ್ಲಿ ಯಲಬುರ್ಗಾ ವಿಧಾನಸಭಾ ಕ್ಷೇತ್ರದಲ್ಲಿ ರೂ.750.00ಲಕ್ಷ ಅಂದಾಜು ಮೊತ್ತದ 10 ಚೆಕ್‌ಡ್ಯಾಂ ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ಸದರಿ ಕಾಮಗಾರಿಗಳಿಗೆ ಇದುವರೆಗೆ ರೂ.236.44ಲಕ್ಷ ವೆಚ್ಚ ಮಾಡಲಾಗಿದೆ. ವಿವರಗಳನ್ನು ಅನುಬಂಧ-4ರಲ್ಲಿ ನೀಡಲಾಗಿದೆ. |

**ಕಡತ ಸಂಖ್ಯೆ: MID 218 LAQ 2020**

**(ಜೆ.ಸಿ.ಮಾಧುಸ್ವಾಮಿ)**
ಕಾನೂನು, ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು

ಶ್ರೀ ಆಚಾರ್ ಹಾಲಪ್ಪ ಬಸಪ್ಪ ಮಾನ್ಯ ವಿಧಾನ ಸಭೆ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:365 (ಅ) ಮತ್ತು ( ಆ)ಕ್ಕೆ ಅನುಬಂಧ-1

ಕೊಪ್ಪಳ ಜಿಲ್ಲೆಯಲ್ಲಿನ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿನ ಕೆರೆಗಳ ವಿವರ

| ಕ್ರ.ಸಂ. | ತಾಲ್ಲೂಕು | ಕೆರೆಯ ಹೆಸರು | ಅಚ್ಚುಕಟ್ಟು (ಹೆಕ್ಟೇರ್ ಗಳಲ್ಲಿ) | ಕೊಪ್ಪಳ ಏತ ನೀರಾವರಿ ಯೋಜನೆ ವ್ಯಾಪ್ತಿಗೆ ಒಳಪಟ್ಟಿದೆಯೇ |
|---|---|---|---|---|
| 1 | 2 | 3 | 4 | 5 |
| 1 | ಕೊಪ್ಪಳ | ಗಿಣಿಗೇರಾ ಕೆರೆ | 84 | |
| 2 | ಕೊಪ್ಪಳ | ಕೆರೆಹಳ್ಳಿ ಕೆರೆ | 103 | |
| 3 | ಕೊಪ್ಪಳ | ಕಲ್‌ತಾವರಗೇರಾ ಕೆರೆ | 101 | |
| 4 | ಕೊಪ್ಪಳ | ಹೊಸುರ ಕೆರೆ | 73 | |
| 5 | ಕೊಪ್ಪಳ | ಹಿರೇಕಾಸನಕಂಡಿ ಕೆರೆ | 49 | |
| 6 | ಕೊಪ್ಪಳ | ಬುಡಶೆಟ್ನಾಳ ಕೆರೆ | 852 | |
| 7 | ಕೊಪ್ಪಳ | ಅಬ್ಬಿಗೇರಾ ಕೆರೆ | 235 | |
| 8 | ಕೊಪ್ಪಳ | ಇಂದರಗಿ ಕೆರೆ | 170 | |
| 9 | ಕೊಪ್ಪಳ | ಕಾಮನೂರ ಕೆರೆ | 50 | |
| 10 | ಕೊಪ್ಪಳ | ಘಟರೆಡ್ಡಿಹಾಳ ಕೆರೆ | 66 | |
| 11 | ಕೊಪ್ಪಳ | ಗಬ್ಬೂರು ಕೆರೆ | 155 | |
| 12 | ಕೊಪ್ಪಳ | ವಣಬಳ್ಳಾರಿ ಜಿನುಗುಕೆರೆ | 41 | |
| 13 | ಕೊಪ್ಪಳ | ಕೂಕನಪಳ್ಳಿ ಜಿನುಗುಕೆರೆ | 42 | |
| 14 | ಕೊಪ್ಪಳ | ಚಳ್ಳಾರಿ ಜಿನುಗುಕೆರೆ | 44 | |
| 15 | ಕೊಪ್ಪಳ | ಹಾಳಹೊಸಳ್ಳಿ ಜಿನುಗುಕೆರೆ | 50 | |
| 16 | ಕೊಪ್ಪಳ | ಹಣವಾಳ ಜಿನುಗುಕೆರೆ | 40 | |
| 17 | ಕೊಪ್ಪಳ | ಹಿರೇಬೊಮ್ಮನಾಳ ಜಿನುಗುಕೆರೆ | 72 | |
| 18 | ಕೊಪ್ಪಳ | ಚಿಕ್ಕಬೊಮ್ಮನಾಳ ಜಿನುಗುಕೆರೆ | 61 | |
| 19 | ಕೊಪ್ಪಳ | ಬೂದಗುಂಪಾ ಜಿನುಗುಕೆರೆ | 40 | |
| 20 | ಕೊಪ್ಪಳ | ದನಗಲದೊಡ್ಡಿ ಜಿನುಗುಕೆರೆ | 55 | |
| 21 | ಕೊಪ್ಪಳ | ಇಂದಿರಾನಗರ ಜಿನುಗುಕೆರೆ | 55 | |
| 22 | ಕೊಪ್ಪಳ | ಜಬ್ಬಲಗುಡ್ಡ ಜಿನುಗುಕೆರೆ | 43 | |
| 23 | ಕೊಪ್ಪಳ | ಹುಚ್ಚೇಶ್ವರ ಜಿನುಗುಕೆರೆ | 40 | |
| 24 | ಕೊಪ್ಪಳ | ಇರಕಲ್‌ಗಡ ಜಿನುಗುಕೆರೆ | 40 | |
| 25 | ಕೊಪ್ಪಳ | ಹಂದ್ರಾಳ ಜಿನುಗುಕೆರೆ | 40 | |
| 26 | ಗಂಗಾವತಿ | ರಾಮಪುರ ಕೆರೆ | 111 | |
| 27 | ಗಂಗಾವತಿ | ರಾಮದುರ್ಗ ಕೆರೆ | 45 | |
| 28 | ಗಂಗಾವತಿ | ಲಾಯದಹುನಸಿ ಕೆರೆ | 162 | |
| 29 | ಗಂಗಾವತಿ | ಬಸರಿಹಾಳ ಕೆರೆ | 162 | |
| 30 | ಗಂಗಾವತಿ | ಕಾಟಾಪುರ ಕೆರೆ | 971 | |
| 31 | ಗಂಗಾವತಿ | ಕರಡೋಣ ಕೆರೆ | 329 | |
| 32 | ಗಂಗಾವತಿ | ಕನಕಗಿರಿ ಕೆರೆ | 576 | |
| 33 | ಗಂಗಾವತಿ | ಇಂಗಳದಾಳ ಕೆರೆ | 212 | |
| 34 | ಗಂಗಾವತಿ | ದೇವಲಾಪುರ ಕೆರೆ | 328 | |
| 35 | ಗಂಗಾವತಿ | ವಿಠಲಾಪುರ ಕೆರೆ | 140 | |
| 36 | ಗಂಗಾವತಿ | ರಾಯಕೆರೆ | 200 | |
| 37 | ಗಂಗಾವತಿ | ಹುಲಿಹೈದರ ಜಿನುಗುಕೆರೆ | 40 | |
| 38 | ಗಂಗಾವತಿ | ಬಿದರಕೊಳ್ಳ ಜಿನುಗುಕೆರೆ | 40 | |
| 39 | ಗಂಗಾವತಿ | ಜೀರಾಳ ಜಿನುಗುಕೆರೆ | 45 | |
| 40 | ಗಂಗಾವತಿ | ನೀರ್ಕೊಳ್ಳಿ ಜಿನುಗುಕೆರೆ | 40 | |
| 41 | ಗಂಗಾವತಿ | ಬೆನ್ನೂರು ಜಿನುಗುಕೆರೆ | 40 | |
| 42 | ಗಂಗಾವತಿ | ಗೌರಿಪುರ ಜಿನುಗುಕೆರೆ | 50 | |
| 43 | ಗಂಗಾವತಿ | ಹಂಪಸದುರ್ಗ ಜಿನುಗುಕೆರೆ | 60 | |
| 44 | ಗಂಗಾವತಿ | ಭಟ್ಟರನರಸಾಪುರ ಜಿನುಗುಕೆರೆ | 75 | |

| ಕ್ರ.ಸಂ. | ತಾಲ್ಲೂಕು | ಕೆರೆಯ ಹೆಸರು | ಅಚ್ಚುಕಟ್ಟು (ಹೆಕ್ಟೇರ್ ಗಳಲ್ಲಿ) | ಕೊಪ್ಪಳ ಏತ ನೀರಾವರಿ ಯೋಜನೆ ವ್ಯಾಪ್ತಿಗೆ ಒಳಪಟ್ಟಿದೆಯೇ |
|---|---|---|---|---|
| 1 | 2 | 3 | 4 | 5 |
| 45 | ಗಂಗಾವತಿ | ಗಡ್ಡಿ ಜಿನುಗುಕೆರೆ | 73 | |
| 46 | ಗಂಗಾವತಿ | ಬೊಮ್ಮಸಾಗರ ಜಿನುಗುಕೆರೆ | 81 | |
| 47 | ಗಂಗಾವತಿ | ಮಲ್ಲಾಪುರ ಜಿನುಗುಕೆರೆ | 51 | |
| 48 | ಗಂಗಾವತಿ | ಕಲಕೇರಿ ಜಿನುಗುಕೆರೆ | 73 | |
| 49 | ಗಂಗಾವತಿ | ಅಗೋಲಿ ಜಿನುಗುಕೆರೆ | 45 | |
| 50 | ಗಂಗಾವತಿ | ವೆಂಕಟಗಿರಿ ಜಿನುಗುಕೆರೆ | 45 | |
| 51 | ಗಂಗಾವತಿ | ಚಿಕ್ಕಮಾದಿನಾಳ ಜಿನುಗುಕೆರೆ | 69 | |
| 52 | ಗಂಗಾವತಿ | ಮಲಕನಮರಡಿ ಜಿನುಗುಕೆರೆ | 53 | |
| 53 | ಗಂಗಾವತಿ | ಯಡಹಳ್ಳಿ ಜಿನುಗುಕೆರೆ | 42 | |
| 54 | ಗಂಗಾವತಿ | ಮಲ್ಲಿಗೆವಾಡ ಜಿನುಗುಕೆರೆ | 40 | |
| 55 | ಗಂಗಾವತಿ | ಚಿರ್ಚನಗುಡ್ಡ ಜಿನುಗುಕೆರೆ | 40 | |
| 56 | ಗಂಗಾವತಿ | ಗುಡದೂರ ಜಿನುಗುಕೆರೆ | 75 | |
| 57 | ಗಂಗಾವತಿ | ನಾಗೇಶನಹಳ್ಳಿ ಜಿನುಗುಕೆರೆ | 40 | |
| 58 | ಗಂಗಾವತಿ | ರಾಯನಕೆರೆ ಜಿನುಗುಕೆರೆ | 45 | |
| 59 | ಗಂಗಾವತಿ | ಹುಲಸನಹಟ್ಟಿ ಜಿನುಗುಕೆರೆ | 53 | |
| 60 | ಗಂಗಾವತಿ | ಹೆಚ್.ಆರ್.ಜಿ.ನಗರ ಜಿನುಗು ಕೆರೆ | 40 | |
| 61 | ಗಂಗಾವತಿ | ವೆಂಕಟಾಪುರ ಜಿನುಗುಕೆರೆ | 40 | |
| 62 | ಗಂಗಾವತಿ | ಪರಾಪುರ ಜಿನುಗುಕೆರೆ | 50 | |
| 63 | ಗಂಗಾವತಿ | ಗಂಗನಾಳ ಜಿನುಗುಕೆರೆ | 40 | |
| 64 | ಗಂಗಾವತಿ | ಆಕಳಕುಂಪಿ ಜಿನುಗುಕೆರೆ | 40 | |
| 65 | ಗಂಗಾವತಿ | ಮುಸಲಾಪುರ ಜಿನುಗುಕೆರೆ | 40 | |
| 66 | ಯಲಬುರ್ಗಾ | ಬಳೂಟಗಿ ಕೆರೆ | 109 | ಹೌದು |
| 67 | ಯಲಬುರ್ಗಾ | ತಲ್ಲೂರ ಕೆರೆ | 191 | ಹೌದು |
| 68 | ಯಲಬುರ್ಗಾ | ವಟಪರ್ವಿ ಕೆರೆ | 148 | ಹೌದು |
| 69 | ಯಲಬುರ್ಗಾ | ನಿಲೊಗಲ್ ಕೆರೆ | 144 | ಹೌದು |
| 70 | ಯಲಬುರ್ಗಾ | ಬೆಣಕಲ್ ಕೆರೆ | 123 | ಹೌದು |
| 71 | ಯಲಬುರ್ಗಾ | ಕಲಭಾವಿ ಕೆರೆ | 73 | ಹೌದು |
| 72 | ಯಲಬುರ್ಗಾ | ಮುರಡಿ ಕೆರೆ | 203 | ಹೌದು |
| 73 | ಯಲಬುರ್ಗಾ | ಮಲಕಸಮುದ್ರ ಕೆರೆ | 680 | ಹೌದು |
| 74 | ಯಲಬುರ್ಗಾ | ಹುಣಸಿಹಾಳ ಜಿನುಗುಕೆರೆ | 40 | ಹೌದು |
| 75 | ಯಲಬುರ್ಗಾ | ರಾಜೂರ ಜಿನುಗುಕೆರೆ | 40 | |
| 76 | ಯಲಬುರ್ಗಾ | ರ್‍ಯಾವಣಕಿ ಜಿನುಗುಕೆರೆ | 45 | |
| 77 | ಯಲಬುರ್ಗಾ | ಚಿಕ್ಕಮ್ಯಾಗೇರಿ ಜಿನುಗುಕೆರೆ | 61 | ಹೌದು |
| 78 | ಯಲಬುರ್ಗಾ | ಗಾಣದಾಳ ಜಿನುಗುಕೆರೆ | 41 | ಹೌದು |
| 79 | ಯಲಬುರ್ಗಾ | ಹೊಸೂರ ಜಿನುಗುಕೆರೆ | 52 | |
| 80 | ಯಲಬುರ್ಗಾ | ಕಟಗಿಹಳ್ಳಿ ಜಿನುಗುಕೆರೆ | 43 | ಹೌದು |
| 81 | ಯಲಬುರ್ಗಾ | ದ್ಯಾಂಪೂರ ಜಿನುಗುಕೆರೆ | 40 | |
| 82 | ಕುಷ್ಟಗಿ | ಬೀಳಗಿ ಕೆರೆ | 45 | |
| 83 | ಕುಷ್ಟಗಿ | ಕಲಾಲಬಂಡಿ ಕೆರೆ | 73 | |
| 84 | ಕುಷ್ಟಗಿ | ಕಬ್ಬರಗಿ ಕೆರೆ | 47 | |
| 85 | ಕುಷ್ಟಗಿ | ಹೊಸಳ್ಳಿ ಕೆರೆ | 97 | |
| 86 | ಕುಷ್ಟಗಿ | ಮಿಯಾಪುರ ಕೆರೆ | 109 | |
| 87 | ಕುಷ್ಟಗಿ | ಹನುಮಗೇರಾ ಕೆರೆ | 61 | |
| 88 | ಕುಷ್ಟಗಿ | ಹನುಮಸಾಗರ ಕೆರೆ | 294 | |
| 89 | ಕುಷ್ಟಗಿ | ಬಾದಮನಾಳ ಕೆರೆ | 100 | |
| 90 | ಕುಷ್ಟಗಿ | ಜಾಗೀರಗುಡದೂರ ಕೆರೆ | 97 | |

| ಕ್ರ.ಸಂ. | ತಾಲ್ಲೂಕು | ಕೆರೆಯ ಹೆಸರು | ಅಚ್ಚುಕಟ್ಟು (ಹೆಕ್ಟೇರ್ ಗಳಲ್ಲಿ) | ಕೊಪ್ಪಳ ಏತ ನೀರಾವರಿ ಯೋಜನೆ ವ್ಯಾಪ್ತಿಗೆ ಒಳಪಟ್ಟಿದೆಯೇ |
|---|---|---|---|---|
| 1 | 2 | 3 | 4 | 5 |
| 91 | ಕುಷ್ಟಗಿ | ವಿರುಪಾಪುರ ಕೆರೆ | 48 | |
| 92 | ಕುಷ್ಟಗಿ | ಹಿರೇನಂದಿಹಾಳ ಕೆರೆ | 83 | |
| 93 | ಕುಷ್ಟಗಿ | ಮುದ್ದಲಗುಂದಿ ಕೆರೆ | 61 | |
| 94 | ಕುಷ್ಟಗಿ | ಮೆಣೇದಾಳ ಕೆರೆ | 62 | |
| 95 | ಕುಷ್ಟಗಿ | ನಾರಿನಾಳ ಕೆರೆ | 85 | |
| 96 | ಕುಷ್ಟಗಿ | ಜುಮಲಾಪುರ ಕೆರೆ | 87 | |
| 97 | ಕುಷ್ಟಗಿ | ಮೆಣಸಗೇರಾ ಕೆರೆ | 65 | |
| 98 | ಕುಷ್ಟಗಿ | ಅಪ್ಪರ್‌ಹಿರೇನಾಲಾ ಕೆರೆ | 1850 | |
| 99 | ಕುಷ್ಟಗಿ | ರಾಯನಕೆರೆ | 48 | |
| 100 | ಕುಷ್ಟಗಿ | ವಿಠಲಾಪುರ ಕೆರೆ | 47 | |
| 101 | ಕುಷ್ಟಗಿ | ನಿಡಶೇಷಿ ಕೆರೆ | 860 | |
| 102 | ಕುಷ್ಟಗಿ | ಪುರ ಕೆರೆ | 1335 | |
| 103 | ಕುಷ್ಟಗಿ | ಮೆಣೇದಾಳ ಜಿನುಗುಕೆರೆ | 41 | |
| 104 | ಕುಷ್ಟಗಿ | ಹಿರೇಮನ್ನಾಪುರ ಜಿನುಗುಕೆರೆ | 60 | |
| 105 | ಕುಷ್ಟಗಿ | ಟೆಂಗುಂಟಿ ಜಿನುಗುಕೆರೆ | 50 | |
| 106 | ಕುಷ್ಟಗಿ | ಕಲಕೇರಿ ಜಿನುಗುಕೆರೆ | 48 | |
| 107 | ಕುಷ್ಟಗಿ | ಗಂಗನಾಳ ಜಿನುಗುಕೆರೆ | 65 | |
| 108 | ಕುಷ್ಟಗಿ | ಲಿಂಗದಳ್ಳಿ ಜಿನುಗುಕೆರೆ | 73 | |
| 109 | ಕುಷ್ಟಗಿ | ಕೊರಡಕೇರಾ ಜಿನುಗುಕೆರೆ | 48 | |
| 110 | ಕುಷ್ಟಗಿ | ವಣಗೇರಿ ಜಿನುಗುಕೆರೆ | 44 | |
| 111 | ಕುಷ್ಟಗಿ | ಗುಮಗೇರಿ ಜಿನುಗುಕೆರೆ | 50 | |
| 112 | ಕುಷ್ಟಗಿ | ನಂದಾಪುರ ಜಿನುಗುಕೆರೆ | 41 | |
| 113 | ಕುಷ್ಟಗಿ | ತಳುವಗೇರಾ ಜಿನುಗುಕೆರೆ | 40 | |
| 114 | ಕುಷ್ಟಗಿ | ವಿರಾಪುರ ಜಿನುಗುಕೆರೆ | 41 | |
| 115 | ಕುಷ್ಟಗಿ | ಮುದೇನೂರ ಜಿನುಗುಕೆರೆ | 43 | |
| 116 | ಕುಷ್ಟಗಿ | ಮನ್ನೇರಾಳ ಜಿನುಗುಕೆರೆ | 40 | |
| 117 | ಕುಷ್ಟಗಿ | ಗಡ್ಡೇರಹಟ್ಟಿ ಜಿನುಗುಕೆರೆ | 40 | |
| 118 | ಕುಷ್ಟಗಿ | ಗೇರಿಪುರ ಜಿನುಗುಕೆರೆ | 41 | |
| 119 | ಕುಷ್ಟಗಿ | ಕಳಮಳ್ಳಿ ಜಿನುಗುಕೆರೆ | 40 | |
| 120 | ಕುಷ್ಟಗಿ | ಹೊಮ್ಮಿನಾಳ ಜಿನುಗುಕೆರೆ | 40 | |
| 121 | ಕುಷ್ಟಗಿ | ಹೊನಗಡ್ಡಿ ಜಿನುಗುಕೆರೆ | 42 | |
| 122 | ಕುಷ್ಟಗಿ | ಅಮರಾಪುರ ತಾಂಡಾ ಜಿನುಗುಕೆರೆ | 64 | |
| | | **ಒಟ್ಟು** | **15840** | |

**ಶ್ರೀ ಆಚಾರ್ ಹಾಲಪ್ಪ ಬಸಪ್ಪ ಮಾನ್ಯ ವಿಧಾನ ಸಭೆ ಸದಸ್ಯರು ಇವರPಚುಕ್ಕೆ1ಗುರುತಿಲ್ಲದ ಪ್ರಶ್ನೆ ಸಂಖ್ಯೆ:365 (ಇ) ಕ್ಕೆ ಅನುಬಂಧ-2**

**ಕೊಪ್ಪಳ ಏತ ನೀರಾವರಿ ಯೋಜನೆಯ ವ್ಯಾಪ್ತಿಯಲ್ಲಿರುವ ಕೆರೆಗಳ ಅಭಿವೃದ್ಧಿ ಕಾಮಗಾರಿಗಳ ವಿವರ**

**ರೂ.ಲಕ್ಷಗಳಲ್ಲಿ**

| ಕ್ರ.ಸಂ. | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಕೆರೆ ಅಭಿವೃದ್ಧಿ ಕಾಮಗಾರಿಯ ಹೆಸರು | ಅಂದಾಜು ಮೊತ್ತ | ವೆಚ್ಚ | ಕಾಮಗಾರಿಯ ಹಂತ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಯಲಬುರ್ಗಾ | 4702-ಪ್ರಧಾನ ಕಾಮಗಾರಿಗಳು | ಬಳೂಟಗಿ ಗ್ರಾಮದ ಕೆರೆಯ ಅಭಿವೃದ್ಧಿ ಕಾಮಗಾರಿ | 100.00 | 88.03 | ಪ್ರಗತಿಯಲ್ಲಿದೆ | |
| 2 | ಯಲಬುರ್ಗಾ | 4702-ಪ್ರಧಾನ ಕಾಮಗಾರಿಗಳು | ಕೊಪ್ಪಳ ಜಿಲ್ಲೆ, ಯಲಬುರ್ಗಾ ವಿಧಾನ ಸಭಾ ಕ್ಷೇತ್ರದ ಮಲಕಸಮುದ್ರ ಗ್ರಾಮದ ಕೆರೆ ಅಭಿವೃದ್ಧಿ ಕಾಮಗಾರಿ. | 70.00 | 0.00 | ಪ್ರಗತಿಯಲ್ಲಿದೆ | |
| 3 | ಯಲಬುರ್ಗಾ | ವಿಶೇಷ ಘಟಕ ಯೋಜನೆ | ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನ ಮುರಡಿಕೆರೆ ಅಭಿವೃದ್ಧಿ ಕಾಮಗಾರಿ | 170.00 | 62.66 | ಪ್ರಗತಿಯಲ್ಲಿದೆ | |
| 4 | ಕುಕನೂರ | ಹೆಚ್.ಕೆ.ಡಿ.ಬಿ | ಕೊಪ್ಪಳ ಜಿಲ್ಲೆಯ ಕುಕನೂರ ತಾಲೂಕಿನ ವಟಪರ್ವಿ ಕೆರೆ ಜೀರ್ಣೋದ್ಧಾರ. | 80.00 | 0.00 | ಕಾರ್ಯಾದೇಶ ನೀಡಬೇಕಾಗಿದೆ | |
| 5 | ಕುಕನೂರ | ಡಿ.ಎಮ್.ಎಫ್ | ಕೊಪ್ಪಳ ಜಿಲ್ಲೆಯ ಕುಕನೂರ ತಾಲೂಕಿನ ಬೆಣಕಲ್ ಕೆರೆ ಅಭಿವೃದ್ಧಿ. | 100.00 | 0.00 | ಪ್ರಗತಿಯಲ್ಲಿದೆ | |
| | | | ಒಟ್ಟು | **520.00** | **150.69** | | |

ಶ್ರೀ ರಾಯರೆಡ್ಡಿ ಬಸವರಾಜ ಹಾಲಪ್ಪ ಬಸಪ್ಪ ಮಾನ್ಯ ವಿಧಾನ ಸಭ ಸದಸ್ಯರು (ಯಲಬುರ್ಗಾ) ಚುಕ್ಕ ಗುರುತಿಲ್ಲದ ಪ್ರಶ್ನೆ ಸಂಖ್ಯೆ:365 (ಈ) ಕ್ಕೆ ಅನುಬಂಧ-3

ಯಲಬುರ್ಗಾ ವಿಧಾನ ಸಭಾ ಕ್ಷೇತ್ರದಲ್ಲಿ ಕಳೆದ 2 ವರ್ಷಗಳಲ್ಲಿ (2018-19 ರಿಂದ 2019-20) ಕೆರೆಗಳ, ಚೆಕ್ ಡ್ಯಾಮ್ ಗಳ ಅಭಿವೃದ್ಧಿಗಾಗಿ ಸಣ್ಣ ನೀರಾವರಿ ಇಲಾಖೆಯಿಂದ ವಿನಿಯೋಗಿಸಿದ ಅನುದಾನದ ವಿವರ

ರೂ.ಲಕ್ಷಗಳಲ್ಲಿ

| ಕ್ರ.ಸಂ. | ತಾಲ್ಲೂಕು | ವರ್ಷ | ಲೆಕ್ಕ ಶೀರ್ಷಿಕೆ | ಕೆರೆ/ಚೆಕ್ ಡ್ಯಾಮ್ ಅಭಿವೃದ್ಧಿ ಕಾಮಗಾರಿಯ ಹೆಸರು | ಅಂದಾಜು ಮೊತ್ತ | ಇದುವರೆಗಿನ ವೆಚ್ಚ | ಪ್ರಗತಿಯ ಹಂತ | | ಷರಾ |
|---|---|---|---|---|---|---|---|---|---|
| | | | | | | | ಪೂರ್ಣಗೊಂಡಿದೆ | ಪ್ರಗತಿಯಲ್ಲಿದೆ | |
| 1 | 2 | 3 | 4 | 5 | 6 | 7 | 8 | 9 | 10 |
| 1 | ಯಲಬುರ್ಗಾ | 2018-19 | 4702-ಪ್ರಧಾನ ಕಾಮಗಾರಿಗಳು | ಕೊಪ್ಪಳ ಜಿಲ್ಲೆ, ಯಲಬುರ್ಗಾ ವಿಧಾನ ಸಭಾ ಕ್ಷೇತ್ರದ ಮಲಕಸಮುದ್ರ ಗ್ರಾಮದ ಕೆರೆ ಅಭಿವೃದ್ಧಿ ಕಾಮಗಾರಿ. | 70.00 | 0.00 | | ಪ್ರಗತಿಯಲ್ಲಿದೆ | |
| 2 | ಯಲಬುರ್ಗಾ | 2018-19 | 4702-ಪ್ರಧಾನ ಕಾಮಗಾರಿಗಳು | ಕೊಪ್ಪಳ ಜಿಲ್ಲೆ, ಯಲಬುರ್ಗಾ ವಿಧಾನ ಸಭಾ ಕ್ಷೇತ್ರದ ಸಂಗನಾಳ ಗ್ರಾಮದ ಕೆರೆ ಅಭಿವೃದ್ಧಿ ಕಾಮಗಾರಿ. | 55.00 | 0.00 | | ಪ್ರಗತಿಯಲ್ಲಿದೆ | |
| 3 | ಯಲಬುರ್ಗಾ | 2018-19 | 4702-ಪ್ರಧಾನ ಕಾಮಗಾರಿಗಳು | ಕೊಪ್ಪಳ ಜಿಲ್ಲೆ, ಯಲಬುರ್ಗಾ ವಿಧಾನ ಸಭಾ ಕ್ಷೇತ್ರದ ಬನ್ನಿಕೊಪ್ಪ ಗ್ರಾಮದ ಕೆರೆಯ ಕೋಡಿ ನಿರ್ಮಾಣ ಕಾಮಗಾರಿ. | 20.00 | 0.00 | ಪೂರ್ಣಗೊಂಡಿದೆ | | |
| 4 | ಯಲಬುರ್ಗಾ | 2019-20 | ವಿಶೇಷ ಘಟಕ ಯೋಜನೆ | ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನ ಬಂಡಿಹಾಳ ಕೆರೆ ಅಭಿವೃದ್ಧಿ ಕಾಮಗಾರಿ | 184.00 | 37.34 | | ಪ್ರಗತಿಯಲ್ಲಿದೆ | |
| 5 | ಯಲಬುರ್ಗಾ | 2019-20 | ವಿಶೇಷ ಘಟಕ ಯೋಜನೆ | ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕಿನ ಮುರಡಿಕೆರೆ ಅಭಿವೃದ್ಧಿ ಕಾಮಗಾರಿ | 170.00 | 62.66 | | ಪ್ರಗತಿಯಲ್ಲಿದೆ | |
| 6 | ಕುಕನೂರ | 2019-20 | ಹೆಚ್.ಕೆ.ಡಿ.ಬಿ | ಕೊಪ್ಪಳ ಜಿಲ್ಲೆಯ ಕುಕನೂರ ತಾಲೂಕಿನ ವಟಪರ್ವಿ ಕೆರೆ ಜೀರ್ಣೋದ್ಧಾರ ಕಾಮಗಾರಿ. | 80.00 | 0.00 | | | ಕಾರ್ಯಾದೇಶ ನೀಡಬೇಕಾಗಿದೆ. |
| 7 | ಕುಕನೂರ | 2019-20 | ಹೆಚ್.ಕೆ.ಡಿ.ಬಿ | ಕುಕನೂರ ತಾಲ್ಲೂಕಿನ ಸೋಂಪುರ ಗ್ರಾಮದಲ್ಲಿ ಸೋಂಪುರ ಕೆರೆ ಅಭಿವೃದ್ಧಿ | 60.00 | 0.00 | | ಪ್ರಗತಿಯಲ್ಲಿದೆ | |
| 8 | ಕುಕನೂರ | 2019-20 | ಹೆಚ್.ಕೆ.ಡಿ.ಬಿ | ಕುಕನೂರ ತಾಲ್ಲೂಕಿನ ಕುದುರಿಮೋತಿ ಗ್ರಾಮದಲ್ಲಿ ಕುದುರಿಮೋತಿ ಕೆರೆ ಅಭಿವೃದ್ಧಿ | 100.00 | 0.00 | | ಪ್ರಗತಿಯಲ್ಲಿದೆ | |
| 9 | ಕುಕನೂರ | 2019-20 | ಹೆಚ್.ಕೆ.ಡಿ.ಬಿ | ಕುಕನೂರ ತಾಲ್ಲೂಕಿನ ಚಿಕ್ಕೇನಕೊಪ್ಪ ಗ್ರಾಮದಲ್ಲಿ ಚಿಕ್ಕೇನಕೊಪ್ಪ ಕೆರೆ ಅಭಿವೃದ್ಧಿ | 150.00 | 0.00 | | ಪ್ರಗತಿಯಲ್ಲಿದೆ | |
| 10 | ಕುಕನೂರ | 2019-20 | ಹೆಚ್.ಕೆ.ಡಿ.ಬಿ | ಕುಕನನೂರ ತಾಲ್ಲೂಕಿನ ತೊಂಡಿಹಾಳ ಗ್ರಾಮದಲ್ಲಿ ತೊಂಡಿಹಾಳ ಕೆರೆ ಅಭಿವೃದ್ಧಿ | 150.00 | 0.00 | | ಪ್ರಗತಿಯಲ್ಲಿದೆ | |
| 11 | ಕುಕನೂರ | 2019-20 | ಡಿ.ಎಮ್.ಎಫ್ | ಕೊಪ್ಪಳ ಜಿಲ್ಲೆಯ ಕುಕನೂರ ತಾಲೂಕಿನ ಬೆಣಕಲ್ ಕೆರೆ ಅಭಿವೃದ್ಧಿ ನಿರ್ಮಾಣ | 100.00 | 0.00 | | ಪ್ರಗತಿಯಲ್ಲಿದೆ | |
| 12 | ಕುಕನೂರ | 2019-20 | ಡಿ.ಎಮ್.ಎಫ್ | ಕುಕನೂರು ನಗರಕ್ಕೆ ಕುಡಿಯುವ ನೀರು ಪೂರೈಸುವ ಉದ್ದೇಶಕ್ಕಾಗಿ ದ್ಯಾಂಪೂರ ಗ್ರಾಮದಲ್ಲಿ ಪರ್ಕಲೇಷನ್ ಟ್ಯಾಂಕ್ ಅಭಿವೃದ್ಧಿ ಪಡಿಸುವ ಕಾಮಗಾರಿ. | 100.00 | 0.00 | | ಪ್ರಗತಿಯಲ್ಲಿದೆ. | |
| | | | | ಒಟ್ಟು | **1239.00** | 100.00 | | | |

ಶ್ರೀ ರಾಯರೆಡ್ಡಿ ಹಾಲಪ್ಪ ಬಸಪ್ಪ ಆಚಾರ್ ವಿಧಾನ ಸಭ ಸದಸ್ಯರು(ಯಲಬುರ್ಗಾ)ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:365 (ಉ) ಕ್ಕೆ ಅನುಬಂಧ-4

ಯಲಬುರ್ಗಾ ವಿಧಾನ ಸಭಾ ಕ್ಷೇತ್ರದಲ್ಲಿ ಕೈಗೊಳ್ಳಲಾದ ಜಿನುಗು ಕೆರೆ/ಚೆಕ್ ಡ್ಯಾಮ್ ಕಾಮಗಾರಿಗಳ ವಿವರ

ರೂ.ಲಕ್ಷಗಳಲ್ಲಿ

| ಕ್ರ.ಸಂ. | ತಾಲ್ಲೂಕು | ಲೆಕ್ಕ ಶೀರ್ಷಿಕೆ | ಜಿನುಗು ಕೆರೆ/ಚೆಕ್ ಡ್ಯಾಮ್ ನಿರ್ಮಾಣ ಕಾಮಗಾರಿಯ ಹೆಸರು | ಅಂದಾಜು ಮೊತ್ತ | ವೆಚ್ಚ | ಪ್ರಗತಿಯ ಹಂತ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಯಲಬುರ್ಗಾ | ನಬಾರ್ಡ ಅಣೆಕಟ್ಟು ಪಿಕಪ್ | ಚಿಕ್ಕೇನಕೊಪ್ಪ ಹತ್ತಿರ ಹರಿಯುವ ಹಳ್ಳಕ್ಕೆ ಅಡ್ಡಲಾಗಿ ಪಿಕ್‌ಅಪ್ ನಿರ್ಮಾಣ ಕಾಮಗಾರಿ | 100.00 | 64.72 | ಪ್ರಗತಿಯಲ್ಲಿದೆ | |
| 2 | ಯಲಬುರ್ಗಾ | ಪ್ರಧಾನ ಕಾಮಗಾರಿ ಆಣೆಕಟ್ಟು ಪಿಕಪ್ | ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲೂಕಿನ ಯರೇಹಂಚಿನಾಳ ಗ್ರಾಮದ ಆಶ್ರಯ ಕಾಲೋನಿ ಹತ್ತಿರ ಕಾಜ್‌ವೇ ಕಂ ಚೆಕ್ ಡ್ಯಾಂ ನಿರ್ಮಾಣ | 50.00 | 0.00 | ಪ್ರಗತಿಯಲ್ಲಿದೆ | |
| 3 | ಯಲಬುರ್ಗಾ | ಪ್ರಧಾನ ಕಾಮಗಾರಿ ಆಣೆಕಟ್ಟು ಪಿಕಪ್ | ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲೂಕಿನ ಚೌಡಾಪುರ ಗ್ರಾಮದ ಹತ್ತಿರ ಹರಿಯುವ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ. | 85.00 | 0.00 | ಪ್ರಗತಿಯಲ್ಲಿದೆ | |
| 4 | ಯಲಬುರ್ಗಾ | ಪ್ರಧಾನ ಕಾಮಗಾರಿ ಆಣೆಕಟ್ಟು ಪಿಕಪ್ | ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲೂಕಿನ ಗಾಣದಾಳ ಗ್ರಾಮದ ಹತ್ತಿರ ಹರಿಯುವ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ. | 75.00 | 0.00 | ಪ್ರಗತಿಯಲ್ಲಿದೆ | |
| 5 | ಯಲಬುರ್ಗಾ | ಪ್ರಧಾನ ಕಾಮಗಾರಿ ಆಣೆಕಟ್ಟು ಪಿಕಪ್ | ಕೊಪ್ಪಳ ಜಿಲ್ಲೆ ಯಲಬುರ್ಗಾ ಪಟ್ಟಣದ ಹತ್ತಿರ ಹರಿಯುವ ಉಸುಕಿನ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ ಕಾಮಗಾರಿ. | 75.00 | 0.00 | ಪ್ರಗತಿಯಲ್ಲಿದೆ | |
| 6 | ಯಲಬುರ್ಗಾ | ವಿಶೇಷ ಘಟಕ ಯೋಜನೆ | ಕೊಪ್ಪಳ ಜಿಲ್ಲೆ ಯಲಬುರ್ಗಾ ವಿಧಾನಸಭಾ ಕ್ಷೇತ್ರ ಯಲಬುರ್ಗಾ ಪಟ್ಟಣದ ಹತ್ತಿರ ಹರಿಯುವ ವರನ ಹಳ್ಳಕ್ಕೆ ಸರ್ವೆ ನಂ 529 ರ ಜಮೀನಿನ ಹತ್ತಿರ ಚೆಕ್ ಡ್ಯಾಂ ನಿರ್ಮಾಣ | 25.00 | 23.26 | ಪ್ರಗತಿಯಲ್ಲಿದೆ | |
| 7 | ಯಲಬುರ್ಗಾ | ವಿಶೇಷ ಘಟಕ ಯೋಜನೆ | ಕೊಪ್ಪಳ ಜಿಲ್ಲೆ, ಯಲಬುರ್ಗಾ ಪಟ್ಟಣದ ಹತ್ತಿರ ಹರಿಯುವ ವರನ ಹಳ್ಳಕ್ಕೆ ಸರಣಿ ಚೆಕ್ ಡ್ಯಾಂ ನಿರ್ಮಾಣ | 60.00 | 0.00 | ಪ್ರಗತಿಯಲ್ಲಿದೆ | |
| 8 | ಯಲಬುರ್ಗಾ | ಗಿರಿಜನ ಉಪಯೋಜನೆ | ಕೊಪ್ಪಳ ಜಿಲ್ಲೆ, ಯಲಬುರ್ಗಾ ತಾಲ್ಲೂಕು ಗುಂಟುಮಡು ಗ್ರಾಮದ ಹತ್ತಿರ ಹರಿಯುವ ಸವಳು ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ. | 120.00 | 99.46 | ಪ್ರಗತಿಯಲ್ಲಿದೆ | |
| 9 | ಯಲಬುರ್ಗಾ | ಗಿರಿಜನ ಉಪಯೋಜನೆ | ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕು ತೊಂಡಿಹಾಳ ಗ್ರಾಮದ ಹತ್ತಿರ ಹರಿಯುವ ಹಳ್ಳಕ್ಕೆ ಚೆಕ್ ಡ್ಯಾಂ ನಿರ್ಮಾಣ. | 55.00 | 49.00 | ಪ್ರಗತಿಯಲ್ಲಿದೆ | |
| 10 | ಯಲಬುರ್ಗಾ | ಗಿರಿಜನ ಉಪಯೋಜನೆ | ಕೊಪ್ಪಳ ಜಿಲ್ಲೆ ಯಲಬುರ್ಗಾ ತಾಲ್ಲೂಕು ಹಿರೇಅರಳಿಹಳ್ಳಿ ಗ್ರಾಮದ ಹತ್ತಿರ ಹರಿಯುವ ಯರೇ ಹಳ್ಳಕ್ಕೆ ಸರಣಿ ಚೆಕ್ ಡ್ಯಾಂ ನಿರ್ಮಾಣ. | 105.00 | 0.00 | ಪ್ರಗತಿಯಲ್ಲಿದೆ | |
| | | | ಒಟ್ಟು | 750.00 | 236.44 | | |

ಕರ್ನಾಟಕ ಸರ್ಕಾರ

ಸಂ:ಬಿಸಿಡಬ್ಲ್ಯೂ 681 ಬಿಎಂಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ:07.12.2020

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ/ಪರಿಷತ್
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

**ವಿಷಯ:** ಕರ್ನಾಟಕ ವಿದಾನ ಸಭೆ/ಪರಿಷತ್ ಸದಸ್ಯರಾದ ಶ್ರೀ ------------ ------------ಇವರ ಚುಕ್ಕೆಗುರುತಿನ/ಗುರುತಿಲ್ಲದ ಪ್ರ.ಸಂ.- ---366--- ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿದಾನ ಸಭೆ/ಪರಿಷತ್ ಸದಸ್ಯರಾದ ಶ್ರೀ -------------------- ಇವರ ಚುಕ್ಕೆಗುರುತಿನ/ಗುರುತಿಲ್ಲದ ಪ್ರ.ಸಂ.--366---ಕ್ಕೆ ಉತ್ತರದ ಪ್ರತಿ ------ ಗಳನ್ನು ಇದರೊಂದಿಗೆ ಲಗತ್ತಿಸಿ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಕೆ. ಅಶ್ವತ್ಥ)
ಸರ್ಕಾರದ ಅಧೀನ ಕಾರ್ಯದರ್ಶಿ-2(ಪ್ರ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 366 |
| ಮಾನ್ಯ ಸದಸ್ಯರ ಹೆಸರು | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) |
| ಉತ್ತರಿಸಬೇಕಾದ ದಿನಾಂಕ | 08.12.2020 |
| ಉತ್ತರಿಸುವ ಸಚಿವರು | ಮಾನ್ಯ ಮುಖ್ಯಮಂತ್ರಿಯವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆಯಲ್ಲಿ ಡಿ.ದೇವರಾಜ ಅರಸು ಅಭಿವೃದ್ಧಿ ನಿಗಮದಿಂದ ಕಳೆದ ಮೂರು ವರ್ಷಗಳಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ಮಂಜೂರಾತಿ ನೀಡಿದ ಫಲಾನುಭವಿಗಳ ಸಂಖ್ಯೆ ಎಷ್ಟು; (ವಿಧಾನಸಭಾ ಕ್ಷೇತ್ರವಾರು ವಿವರ ನೀಡುವುದು) | ಕೊಪ್ಪಳ ಜಿಲ್ಲೆಯಲ್ಲಿ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಕಳೆದ ಮೂರು ವರ್ಷಗಳಲ್ಲಿ ಮಂಜೂರಾತಿ ನೀಡಿದ ಫಲಾನುಭವಿಗಳ ಸಂಖ್ಯೆ:322, ವಿಧಾನ ಸಭಾ ಕ್ಷೇತ್ರವಾರು ವಿವರ ಈ ಕೆಳಕಂಡಂತಿದೆ.<br>1 - ಕೊಪ್ಪಳ - 64<br>2 - ಗಂಗಾವತಿ - 66<br>3 - ಕುಷ್ಟಗಿ - 64<br>4 - ಯಲಬುರ್ಗ - 66<br>5 - ಕನಕಗಿರಿ - 62<br>ಒಟ್ಟು - 322 |
| ಆ) | ಇವುಗಳಲ್ಲಿ ಕೊಳವೆ ಬಾವಿ ಕೊರೆಯಿಸಲು ಬಾಕಿ ಇರುವ ಪ್ರಕರಣಗಳ ಸಂಖ್ಯೆ ಎಷ್ಟು; ಬಾಕಿ ಉಳಿಯಲು ಕಾರಣವೇನು; | ಕೊಪ್ಪಳ ಜಿಲ್ಲೆಗೆ 322 ಕೊಳವೆ ಬಾವಿಗಳು ಮಂಜೂರಾಗಿದ್ದು, ಎಲ್ಲಾ ಕೊಳವೆ ಬಾವಿಗಳನ್ನು ಕೊರೆಯಿಸಲಾಗಿದೆ. |
| ಇ) | ಸದರಿ ಫಲಾನುಭವಿಗಳ ಪೈಕಿ ಕೊಳವೆ ಬಾವಿ ಕೊರೆಯಿಸಲಾದ ಫಲಾನುಭವಿಗಳ ಸಂಖ್ಯೆ ಎಷ್ಟು; ಕೊರೆಯಲಾದ ಕೊಳವೆ ಬಾವಿಗಳಿಗೆ ಸಾಮಗ್ರಿಗಳು, ವಿದ್ಯುತ್ ಸಂಪರ್ಕ ಸೇರಿದಂತೆ ಯೋಜನೆಯನ್ವಯ ಎಲ್ಲಾ ಸೌಕರ್ಯಗಳನ್ನು ನೀಡಲಾಗಿದೆಯೇ; | ಕೊರೆಯಿಸಲಾದ ಕೊಳವೆ ಬಾವಿಗಳ ಸಂಖ್ಯೆ; 322<br>ಕೊರೆದ ಎಲ್ಲಾ ಕೊಳವೆ ಬಾವಿಗಳಿಗೆ ಸಾಮಗ್ರಿಗಳು, ವಿದ್ಯುತ್ ಸಂಪರ್ಕ ಸೇರಿದಂತೆ ಯೋಜನೆಯ ಎಲ್ಲಾ ಸೌಕರ್ಯ ನೀಡಿರುವುದಿಲ್ಲ.<br>ಪಂಪ್‌ಸೆಟ್ ಹಾಗೂ ಸಾಮಗ್ರಿ ನೀಡಿದ ಕೊಳವೆ ಬಾವಿಗಳ ಸಂಖ್ಯೆ 107 ಈ ಪೈಕಿ 80 ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿರುತ್ತದೆ. ಉಳಿದ 27 ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಬಾಕಿ ಇರುತ್ತದೆ.<br>2018-19 ಹಾಗೂ 2019-20ನೇ ಸಾಲಿನ 215 ಕೊಳವೆ ಬಾವಿಗಳನ್ನು ಇತ್ತೀಚೆಗೆ ಕೊರೆಯಿಸಿದ್ದು, ಇವುಗಳಿಗೆ ಪಂಪ್ ಸೆಟ್ ಹಾಗೂ ಪೂರಕ ಸಾಮಗ್ರಿಗಳನ್ನು ಸರಬರಾಜು ಮಾಡಬೇಕಾಗಿದೆ.<br>2018-19ನೇ ಸಾಲಿನ ಕೊಳವೆ ಬಾವಿಗಳಿಗೆ ಪಂಪ್ ಸೆಟ್ ಸರಬರಾಜಿಗೆ ಕ್ರಮವಹಿಸಲಾಗುತ್ತಿದೆ.<br>2019-20ನೇ ಸಾಲಿನ ಕೊಳವೆ ಬಾವಿಗಳಿಗೆ ಪಂಪ್‌ಸೆಟ್‌ಗಳನ್ನು ಸರಬರಾಜು ಮಾಡಲು ಟೆಂಡರ್ ಆಹ್ವಾನಿಸಬೇಕಾಗಿದೆ. |

...2

<table>
<tr>
<td>ಈ)</td>
<td>ಕೊಳವೆ ಬಾವಿಗಳನ್ನು ಕೊರೆಯಿಸಿದ ಮೇಲೆ ವಿದ್ಯುತ್ ಸಂಪರ್ಕ ಹಾಗೂ ಸಾಮಗ್ರಿಗಳ ಹಂಚಿಕೆಗಾಗಿ ಬಾಕಿ ಇರುವ ಪ್ರಕರಣಗಳ ಸಂಖ್ಯೆ ಎಷ್ಟು? (ಕ್ಷೇತ್ರವಾರು ವಿವರಗಳನ್ನು ನೀಡುವುದು)</td>
<td>ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಹಾಗೂ ಸಾಮಗ್ರಿಗಳ ಹಂಚಿಕೆಗಾಗಿ ಬಾಕಿ ಇರುವ ಸಂಖ್ಯೆ:242 ಕ್ಷೇತ್ರವಾರು ವಿವರ ಈ ಕೆಳಕಂಡಂತಿದೆ.
<table>
<tr><th>ಕ್ರ.ಸಂ</th><th>ಕ್ಷೇತ್ರದ ಹೆಸರು</th><th>ಸಾಮಗ್ರಿಗಳ ಹಂಚಿಕೆ ಹಾಗೂ ವಿದ್ಯುತ್ ಸಂಪರ್ಕಕ್ಕೆ ಬಾಕಿ</th><th>ಸಾಮಗ್ರಿಗಳ ಹಂಚಿಕೆ ಮಾಡಿ ವಿದ್ಯುತ್ ಸಂಪರ್ಕಕ್ಕೆ ಬಾಕಿ</th><th>ಒಟ್ಟು</th></tr>
<tr><td>1</td><td>ಕೊಪ್ಪಳ</td><td>43</td><td>9</td><td>52</td></tr>
<tr><td>2</td><td>ಗಂಗಾವತಿ</td><td>44</td><td>10</td><td>54</td></tr>
<tr><td>3</td><td>ಕುಷ್ಟಗಿ</td><td>43</td><td>0</td><td>43</td></tr>
<tr><td>4</td><td>ಯಲಬುರ್ಗಾ</td><td>44</td><td>3</td><td>47</td></tr>
<tr><td>5</td><td>ಕನಕಗಿರಿ</td><td>41</td><td>5</td><td>46</td></tr>
<tr><td colspan="2">ಒಟ್ಟು</td><td>215</td><td>27</td><td>242</td></tr>
</table>
</td>
</tr>
</table>

ಸಂಖ್ಯೆ:ಹಿಂವಕ 681 ಬಿಎಂಎಸ್ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿಗಳು

KCI-KSN/84/2020-AK-KC SEC

# ಕರ್ನಾಟಕ ಸರ್ಕಾರ

ಸಂಖ್ಯೆ: ಕಸಂವಾ 84 ಕಸನಿ ಆಕ 2020.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 07.12.2020.

**ಇಂದ:**

ಸರ್ಕಾರದ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿಗಳು,
ಕರ್ನಾಟಕ ಸಭೆ,
ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

CDS

11

8/12/2020

**ಮಾನ್ಯರೇ,**

**ವಿಷಯ:**ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 367ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 367ಕ್ಕೆ ಉತ್ತರದ 25 ಪ್ರತಿ ಹಾಗೂ 05 ಸಿ.ಡಿ.ಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿರುತ್ತೇನೆ.

ತಮ್ಮ ನಂಬುಗೆಯ,

(ಹೆಚ್.ಕೆ. ಸುರೇಶಬಾಬು)
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ,
(ಆಡಳಿತ ಕನ್ನಡ)

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 367 |
| ಸದಸ್ಯರ ಹೆಸರು | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) |
| ಉತ್ತರಿಸಬೇಕಾದ ದಿನಾಂಕ | 08.12.2020 |
| ಉತ್ತರಿಸುವ ಸಚಿವರು | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಹಾಗೂ ಸಾರ್ವಜನಿಕ ಸಂಪರ್ಕ ಇಲಾಖೆಯಲ್ಲಿನ ಕಛೇರಿಗಳಿಗೆ ಮಂಜೂರು ಮಾಡಲಾದ ಹುದ್ದೆಗಳ ಸಂಖ್ಯೆ ಎಷ್ಟು. | **ಕನ್ನಡ ಮತ್ತು ಸಂಸ್ಕೃತಿ ಇಲಾಖೆ**<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕೊಪ್ಪಳ ಜಿಲ್ಲಾ ಕಚೇರಿಗೆ ವಿವಿಧ ವೃಂದದ ಒಟ್ಟು 03 ಹುದ್ದೆಗಳು ಮಂಜೂರಾಗಿರುತ್ತದೆ.<br>**ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ**<br>ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ಕೊಪ್ಪಳ ಜಿಲ್ಲಾ ಕಚೇರಿಗೆ ವಿವಿಧ ವೃಂದದ ಒಟ್ಟು 08 ಹುದ್ದೆಗಳು ಮಂಜೂರಾಗಿರುತ್ತವೆ. |
| ಆ) | ಸದರಿ ಹುದ್ದೆಗಳಲ್ಲಿ ಭರ್ತಿ ಮಾಡಲಾದ ಹಾಗೂ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು (ವಿವರ ನೀಡುವುದು) | **ಕನ್ನಡ ಮತ್ತು ಸಂಸ್ಕೃತಿ ಇಲಾಖೆ**<br>ಸಹಾಯಕ ನಿರ್ದೇಶಕರು -ಖಾಲಿ<br>ಬೆರಳಚ್ಚುಗಾರರು -01 ಹುದ್ದೆ ಭರ್ತಿ ಮಾಡಲಾಗಿದೆ<br>ದಲಾಯಿತ್ -ಖಾಲಿ<br>**ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ**<br>ಸದರಿ ಹುದ್ದೆಗಳ ಪೈಕಿ 02 ಹುದ್ದೆಗಳನ್ನು ಭರ್ತಿ ಮಾಡಲಾಗಿದ್ದು, ಸಹಾಯಕ ನಿರ್ದೇಶಕರ 01 ಹುದ್ದೆಯನ್ನು ಹೆಚ್ಚುವರಿ ಪ್ರಭಾರದಲ್ಲಿರಿಸಲಾಗಿದೆ. |

| ಕ್ರ. ಸಂ. | ಪದನಾಮ | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿಯಾದ ಹುದ್ದೆಗಳ ಸಂಖ್ಯೆ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಸಹಾಯಕ ನಿರ್ದೇಶಕರು | 01 | -- | 01 (ಪ್ರಭಾರ) |
| 2 | ವಾರ್ತಾ ಸಹಾಯಕರು | 01 | -- | 01 |
| 3 | ಪ್ರ.ದ.ಸ. | 01 | 01 | -- |
| 4 | ಬೆರಳಚ್ಚುಗಾರರು | 01 | -- | 01 |
| 5 | ವಾಹನ ಚಾಲಕರು | 02 | -- | 02 |
| 6 | ಗ್ರೂಪ್ ಡಿ | 02 | 02 | -- |
| | **ಒಟ್ಟು** | **08** | **03** | **05** |

| | | |
|---|---|---|
| ಇ) | ಖಾಲಿ ಇರುವ ಹುದ್ದೆಗಳಿಂದಾಗಿ ಹಾಗೂ ಹೆಚ್ಚುವರಿ ಪ್ರಭಾರಿ ಅಧಿಕಾರಿಗಳಿಂದಾಗಿ ಸದರಿ ಕಛೇರಿಯಲ್ಲಿ ನಿರೀಕ್ಷತ ಮಟ್ಟದಲ್ಲಿ ಪ್ರಗತಿ ಸಾಧ್ಯವಾಗದಿರುವ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ ಈ ಕುರಿತು ಸರ್ಕಾರ ಕೈಗೊಂಡಿರುವ ಕ್ರಮಗಳೇನು | **ಕನ್ನಡ ಮತ್ತು ಸಂಸ್ಕೃತಿ ಇಲಾಖೆ**<br>1. ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬಳ್ಳಾರಿ ಜಿಲ್ಲೆ ಇವರನ್ನು ಕೊಪ್ಪಳ ಜಿಲ್ಲೆಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಾಯಕ ನಿರ್ದೇಶಕರ ಹುದ್ದೆಗೆ ಹೆಚ್ಚಿನ ಪ್ರಭಾರದಲ್ಲಿರಿಸಲಾಗಿದೆ.<br>2. ಎರಡು ಹುದ್ದೆ ಖಾಲಿ ಇದ್ದು, ಸಹಾಯಕ ನಿರ್ದೇಶಕರ 01 ಹುದ್ದೆಯನ್ನು ತುಂಬಲು ಕರ್ನಾಟಕ ಲೋಕಾಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಕರ್ನಾಟಕ ಲೋಕಾಸೇವಾ ಆಯೋಗವು ಸದರಿ ಹುದ್ದೆಯ ಭರ್ತಿಗೆ ಸಂಬಂಧಿಸಿದಂತೆ ಅಧಿಸೂಚನೆ ಹೊರಡಿಸಿರುತ್ತದೆ.<br>**ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ**<br>ಖಾಲಿ ಇರುವ ಗ್ರೂಪ್ ಸಿ ವೃಂದದ ಹುದ್ದೆಗಳನ್ನು ಹೊರ ಗುತ್ತಿಗೆ ಆಧಾರದ ಮೇಲೆ ಪಡೆದು ಕಚೇರಿ ಕೆಲಸ ನಿರ್ವಹಿಸಲಾಗುತ್ತಿದ್ದು, ಕಚೇರಿಯಲ್ಲಿ ಬಾಹ್ಯ ಗುತ್ತಿಗೆಯಿಂದ ಪಡೆದಿರುವ ಸೇವೆಯನ್ನು ಹೊರತುಪಡಿಸಿ, ಖಾಲಿ ಇರುವ ಸಹಾಯಕ" ನಿರ್ದೇಶಕರು ಮತ್ತು ವಾರ್ತಾ ಸಹಾಯಕರ ಹುದ್ದೆಗಳನ್ನು ಭರ್ತಿಮಾಡುವ ಕುರಿತಾದ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. |
| ಈ) | ಕಳೆದ ಕೆಲವು ತಿಂಗಳುಗಳಿಂದ ಕಲಾವಿದರುಗಳಿಗೆ ಮಾಶಾಸನವನ್ನೂ ಸಹ ಸಮರ್ಪಕವಾಗಿ ವಿತರಿಸದೇ ಇರುವ ವಿಷಯವನ್ನು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದಕ್ಕೆ ಕಾರಣವೇನು; | **ಕನ್ನಡ ಮತ್ತು ಸಂಸ್ಕೃತಿ ಇಲಾಖೆ**<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕೊಪ್ಪಳ ಜಿಲ್ಲಾ ಸಹಾಯಕ ನಿರ್ದೇಶಕರ ಹುದ್ದೆಯು ಖಾಲಿ ಇದ್ದುದ್ದರಿಂದ ಸದರಿ ಹುದ್ದೆಗೆ ಶಿಕ್ಷಣ ಇಲಾಖೆಯ ಅಧಿಕಾರಿಯನ್ನು ಪ್ರಭಾರದಲ್ಲಿರಿಸಿ ಜಿಲ್ಲಾಧಿಕಾರಿ ಹಂತದಲ್ಲಿ ಕ್ರಮವಹಿಸಿದ್ದು, ಕೆಲಸ ಸಮರ್ಪಕವಾಗಿ ನಡೆಯದೇ ಇರುವುದರಿಂದ ತದನಂತರ ಇಲಾಖೆಯಿಂದ ಬಳ್ಳಾರಿ ಜಿಲ್ಲಾ ಸಹಾಯಕ ನಿರ್ದೇಶಕರನ್ನು ಹೆಚ್ಚುವರಿ ಪ್ರಭಾರದಲ್ಲಿರಿಸಿ ಕಲಾವಿದರ ಮಾಸಾಶನವನ್ನು ನವೆಂಬರ್‌ವರೆಗೆ ಪಾವತಿಸಲು ಕ್ರಮವಹಿಸಲಾಗಿದೆ.<br>**ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ**<br>ಅನ್ವಯಿಸುವುದಿಲ್ಲ. |
| ಉ) | ಸದರಿ ಕಛೇರಿಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು? | **ಕನ್ನಡ ಮತ್ತು ಸಂಸ್ಕೃತಿ ಇಲಾಖೆ**<br>ಕೊಪ್ಪಳ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ಸಂಖ್ಯೆ: 01<br>**ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ**<br>ಸದರಿ ಕಚೇರಿಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಒಟ್ಟು : 02. |

ಸಂಖ್ಯೆ: ಕಸಂವಾ 84 ಕಸನಿ 2020.

(ಬಿ.ಎಸ್.ಯಡಿಯೂರಪ್ಪ)
ಮಾನ್ಯ ಮುಖ್ಯಮಂತ್ರಿಗಳು

**ಕರ್ನಾಟಕ ಸರ್ಕಾರ**

ಸಂಖ್ಯೆ:ಆಇ 105 ಇಎಲ್‌ಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:07.12.2020

ಇಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ,
ಬೆಂಗಳೂರು.

12
8/12/2020

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 368ಕ್ಕೆ ಉತ್ತರ ಕಳುಹಿಸುವ ಕುರಿತು.

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 368ಕ್ಕೆ ಉತ್ತರವನ್ನು ತಯಾರಿಸಿ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

7.12.20

(ಅಜಯ್ ಎಸ್. ಕೊರಡೆ)
ಶಾಖಾಧಿಕಾರಿ,
ಆರ್ಥಿಕ ಇಲಾಖೆ (ಅಬಕಾರಿ).

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 368 |
| ಮಾನ್ಯ ಸದಸ್ಯರ ಹೆಸರು | ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) |
| ಉತ್ತರಿಸಬೇಕಾದ ದಿನಾಂಕ | 08-12-2020 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆಯಲ್ಲಿ ಹೆಚ್ಚಿನ ದರಕ್ಕೆ ಮದ್ಯ ಮಾರಾಟ ಮಾಡುತ್ತಿರುವ ವಿಷಯವಾಗಿ ಪ್ರಸಕ್ತ ಸಾಲಿನಲ್ಲಿ ಕೈಗೊಂಡ ಹಠಾತ್ ದಾಳಿಗಳ ಸಂಖ್ಯೆ ಎಷ್ಟು; | ಕೊಪ್ಪಳ ಜಿಲ್ಲೆಯಲ್ಲಿ ಹೆಚ್ಚಿನ ದರಕ್ಕೆ ಮದ್ಯ ಮಾರಾಟ ಮಾಡುತ್ತಿರುವ ಸಂಬಂಧ 2020-21ನೇ ಅಬಕಾರಿ ಸಾಲಿನಲ್ಲಿ (ಜುಲೈಯಿಂದ ನವೆಂಬರ್‌ವರೆಗೆ) 14 ಸನ್ನದುಗಳ ಮೇಲೆ ಹಠಾತ್ ದಾಳಿ ಮಾಡಲಾಗಿದೆ. |
| ಆ) | ಸದರಿ ದಾಳಿಗಳ ಸಫಲತೆಯ ಪ್ರಮಾಣವೆಷ್ಟು; ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು; | ಎಲ್ಲಾ 14 ಸನ್ನದುದಾರುಗಳ ವಿರುದ್ಧ ಎಮ್.ಆರ್.ಪಿ ಉಲ್ಲಂಘನೆ ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ. ಸದರಿ ಪ್ರಕರಣಗಳು ಇಲಾಖಾ ಮುಖಾಂತರ ದಂಡ ವಿಧಿಸಿ ಇತ್ಯರ್ಥಗೊಳಿಸಬಹುದಾದ ಪ್ರಕರಣಗಳಾಗಿರುತ್ತದೆ. ಈ 14 ಪ್ರಕರಣಗಳ ಪೈಕಿ 7 ಪ್ರಕರಣಗಳನ್ನು ಇತ್ಯರ್ಥಪಡಿಸಿ ಪ್ರತಿ ಪ್ರಕರಣದಲ್ಲಿ ಕನಿಷ್ಠ ರೂ. 15,000/-ರಿಂದ ಗರಿಷ್ಠ ರೂ.30,000/-ರ ವರೆಗೆ ದಂಡವನ್ನು ವಿಧಿಸಲಾಗಿರುತ್ತದೆ. ಹೀಗೆ ಒಟ್ಟು ರೂ 1,56,000/- ಗಳ ದಂಡ ವಸೂಲು ಮಾಡಲಾಗಿದ್ದು, ಉಳಿದ 07 ಪ್ರಕರಣಗಳು ಇನ್ನೂ ದಂಡ ವಿಧಿಸಿ ಇತ್ಯರ್ಥಗೊಳಿಸಲು ಬಾಕಿ ಇರುತ್ತದೆ. |
| ಇ) | ಈ ಜಿಲ್ಲೆಯಲ್ಲಿರುವ ಒಟ್ಟು ಮದ್ಯದಂಗಡಿಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಜಿಲ್ಲೆಯಲ್ಲಿರುವ ಒಟ್ಟು ಮದ್ಯದಂಗಡಿಗಳ ತಾಲ್ಲೂಕುವಾರು ವಿವರಗಳು ಕೆಳಕಂಡಂತಿದೆ. |

| ತಾಲ್ಲೂಕು | ಸಿಎಲ್ -2 | ಸಿಎಲ್ -4 | ಸಿಎಲ್ -7 | ಸಿಎಲ್ -9 | ಸಿಎಲ್ -11[1] | WT/ WB | ಒಟ್ಟು |
|---|---|---|---|---|---|---|---|
| ಕೊಪ್ಪಳ | 11 | 2 | 15 | 11 | 7 | 4 | 56 |
| ಗಂಗಾವತಿ | 12 | - | 16 | 3 | 1 | 4 | 36 |
| ಕಾರಟಗಿ | 3 | - | 9 | 1 | 3 | 1 | 17 |
| ಕನಕಗಿರಿ | 3 | - | 2 | 1 | - | 4 | 10 |
| ಕುಷ್ಟಗಿ | 13 | - | 5 | - | 6 | 6 | 30 |
| ಯಲಬುರ್ಗಾ | 4 | - | - | - | 3 | 4 | 11 |
| ಕುಕನೂರು | 4 | - | 1 | 2 | - | - | 7 |
| | | | | | | ಒಟ್ಟು | 167 |

| | | |
|---|---|---|
| ಈ) | ಈ ಜಿಲ್ಲೆಯಲ್ಲಿ ಇನ್ನೂ ಹೆಚ್ಚಿನ ಮದ್ಯದಂಗಡಿಗಳನ್ನು ತೆರೆಯುವ ಪ್ರಸ್ತಾವನೆ ಸರ್ಕಾರಕ್ಕೆ ಸ್ವೀಕೃತವಾಗಿವೆಯೇ; ಸ್ವೀಕೃತವಾಗಿದ್ದಲ್ಲಿ, ವಿವರಗಳನ್ನು ನೀಡುವುದು; | ಪ್ರಸ್ತುತ ಸಿಎಲ್–4, ಸಿಎಲ್–7 ಮತ್ತು ಸಿಎಲ್–11(ಸಿ) ಮದ್ಯದಂಗಡಿಗಳನ್ನು ತೆರೆಯಲು ಅವಕಾಶವಿರುತ್ತದೆ. ಸಿಎಲ್–4 ಮತ್ತು ಸಿಎಲ್–7 ಸನ್ನದುಗಳ ಮಂಜೂರಾತಿಗೆ ಪ್ರಸ್ತಾವನೆ ಸ್ವೀಕೃತವಾದಲ್ಲಿ ನಿಯಮಾನುಸಾರ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುವುದು ಹಾಗೂ ಸರ್ಕಾರದ ನಿರ್ದೇಶನದನ್ವಯ ಸಿಎಲ್–11(ಸಿ) ಸನ್ನದುಗಳ ಮಂಜೂರಾತಿಗೆ ಕ್ರಮ ಕೈಗೊಳ್ಳಲಾಗುತ್ತದೆ.<br><br>2009ರಲ್ಲಿ ಸರ್ಕಾರವು ಕೊಪ್ಪಳ ಜಿಲ್ಲೆಗೆ ಒಟ್ಟು 10 11(ಸಿ) ಸನ್ನದುಗಳನ್ನು ನಿಗಧಿಪಡಿಸಿದ್ದು, ಎಲ್ಲಾ ಸನ್ನದುಗಳನ್ನು ಮಂಜೂರು ಮಾಡಲಾಗಿದೆ. 2016ರಲ್ಲಿ ಕೊಪ್ಪಳ ಜಿಲ್ಲೆಗೆ 20 11(ಸಿ) ಸನ್ನದುಗಳನ್ನು ನಿಗಧಿಪಡಿಸಿದ್ದು, ಈ ಪೈಕಿ 11 ಸನ್ನದುಗಳನ್ನು ಈಗಾಗಲೇ ಮಂಜೂರು ಮಾಡಲಾಗಿರುತ್ತದೆ. ಉಳಿದ 9 ಸನ್ನದುಗಳ ಮಂಜೂರಾತಿಗೆ ಎಂ.ಎಸ್.ಐ.ಎಲ್ ಸಂಸ್ಥೆಯವರು ಪ್ರಸ್ತಾವನೆ ಸಲ್ಲಿಸಿದಲ್ಲಿ ನಿಯಮಾನುಸಾರ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುತ್ತದೆ. |
| ಉ) | ಸದರಿ ಜಿಲ್ಲೆಯಲ್ಲಿ ಹೊಸದಾಗಿ ಯಾವ ಯಾವ ಭಾಗದಲ್ಲಿ ಹೊಸ ಮದ್ಯದಂಗಡಿಗಳನ್ನು ಪ್ರಾರಂಭಿಸಲು ಸರ್ಕಾರ ಅನುಮತಿಯನ್ನು ನೀಡುತ್ತಿದೆ? (ವಿವರ ನೀಡುವುದು) | ಸರ್ಕಾರವು ಸಿಎಲ್–11(ಸಿ) ಸನ್ನದು ಮಂಜೂರಾತಿಗೆ ಸಂಬಂಧಿಸಿದಂತೆ ಪ್ರತಿ ಮತಕ್ಷೇತ್ರಕ್ಕೆ 4 ರಂತೆ ಕೊಪ್ಪಳ ಜಿಲ್ಲೆಗೆ ಒಟ್ಟು 20 ಸನ್ನದುಗಳನ್ನು ನಿಗಧಿಪಡಿಸಿದ್ದು, ಈವರೆಗೆ 11 ಸನ್ನದುಗಳನ್ನು ಮಂಜೂರು ಮಾಡಲಾಗಿರುತ್ತದೆ. ಉಳಿದ 9 ಸನ್ನದುಗಳ ಮಂಜೂರಾತಿಗೆ ಎಂ.ಎಸ್.ಐ.ಎಲ್ ಸಂಸ್ಥೆಯವರು ಪ್ರಸ್ತಾವನೆ ಸಲ್ಲಿಸಿದಲ್ಲಿ, ನಿಯಮಾನುಸಾರ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುತ್ತದೆ.<br><br>ಸಿಎಲ್–4 ಮತ್ತು ಸಿಎಲ್–7 ಸನ್ನದುಗಳ ಮಂಜೂರಾತಿಗೆ ಯಾವುದೇ ರೀತಿಯ ಭೌಗೋಳಿಕ ನಿರ್ಬಂಧ ಇರುವುದಿಲ್ಲ. ಅರ್ಜಿದಾರರು ಆಯ್ಕೆ ಮಾಡಿದ ಸ್ಥಳವನ್ನು ಪರಿಶೀಲಿಸಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತದೆ. |

ಆಇ 105 ಇಎಲ್‌ಕ್ಯೂ 2020

(ಹೆಚ್. ನಾಗೇಶ್)
ಅಬಕಾರಿ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ:ಆಇ 106 ಇಎಲ್‌ಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:07.12.2020

42

370
8/12/2020

ಇಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಭೀಮಾ ನಾಯ್ಕ್ ಎಸ್ (ಹಗರಿಬೊಮ್ಮನಹಳ್ಳಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 370ಕ್ಕೆ ಉತ್ತರ ಕಳುಹಿಸುವ ಕುರಿತು.

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಭೀಮಾ ನಾಯ್ಕ್ ಎಸ್ (ಹಗರಿಬೊಮ್ಮನಹಳ್ಳಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 370ಕ್ಕೆ ಉತ್ತರವನ್ನು ತಯಾರಿಸಿ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

7.12.20

(ಅಜಯ್ ಎಸ್. ಕೊರಡೆ)
ಶಾಖಾಧಿಕಾರಿ,
ಆರ್ಥಿಕ ಇಲಾಖೆ (ಅಬಕಾರಿ).

# ಕರ್ನಾಟಕ ವಿಧಾನಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 370 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಭೀಮಾ ನಾಯ್ಕ ಎಸ್ (ಹಗರಿಬೊಮ್ಮನಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | 08-12-2020 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಸ್ಥಳೀಯ ಶಾಸಕರ ಗಮನಕ್ಕೆ ತರದೇ ಎಂ.ಎಸ್.ಐ.ಎಲ್ ಮಳಿಗೆಗಳನ್ನು ಪ್ರಾರಂಭ ಮಾಡಲು ಸರ್ಕಾರ ಮುಂದಾಗಿರುವುದು ನಿಜವೇ; | ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 15 ಇಎಫ್‌ಎಲ್ 2015 ದಿ:23.09.2016 ರಲ್ಲಿ ರಾಜ್ಯದ 220 ವಿಧಾನ ಸಭಾ ಕ್ಷೇತ್ರಗಳಿಗೆ ಪ್ರತಿ ಕ್ಷೇತ್ರಕ್ಕೆ 4 ಸನ್ನದುಗಳಂತೆ ಒಟ್ಟು 880, ಯಾದಗಿರಿ ಜಿಲ್ಲೆಯ ನಾಲ್ಕು ವಿಧಾನ ಸಭಾ ಕ್ಷೇತ್ರಗಳಿಗೆ ತಲಾ 5 ರಂತೆ ಒಟ್ಟು 20, ಹೀಗೆ ರಾಜ್ಯದಲ್ಲಿ ಒಟ್ಟಾರೆ 900 ಸಿಎಲ್ 11-ಸಿ ಸನ್ನದುಗಳನ್ನು ಷರತ್ತುಗಳೊಂದಿಗೆ ಎಂ.ಎಸ್.ಐ.ಎಲ್ ಸಂಸ್ಥೆಗೆ ಮಂಜೂರಾತಿ ನೀಡಲು ಸರ್ಕಾರವು ಅನುಮತಿ ನೀಡಿರುತ್ತದೆ. ಈ ಪೈಕಿ ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ 04 ಸಿಎಲ್-11ಸಿ ಸನ್ನದುಗಳನ್ನು ಮಂಜೂರು ಮಾಡಲು ಕೋಟಾ ಹಂಚಿಕೆಯಾಗಿದ್ದು, ಈ ಪೈಕಿ ಬಾಚಿಗೊಂಡನಹಳ್ಳಿ ಗ್ರಾಮ, ಮಲ್ಲನಾಯಕನಹಳ್ಳಿ ಮತ್ತು ಮರಿಯಮ್ಮನಹಳ್ಳಿ ಎಂಬ ಮೂರು ಸ್ಥಳಗಳಿಗೆ ಈಗಾಗಲೇ ಸಿಎಲ್-11ಸಿ ಸನ್ನದುಗಳನ್ನು ಮಂಜೂರು ಮಾಡಲು ಪೂರ್ವಾನುಮತಿ ನೀಡಲಾಗಿರುತ್ತದೆ.<br><br>ಅಬಕಾರಿ ಆಯುಕ್ತರ ಸುತ್ತೋಲೆ ಸಂಖ್ಯೆ: ಇಸಿಐ/01/ಎಂಎಸ್‌ಐಎಲ್/ 2016 ದಿನಾಂಕ:07.11.2016 ರಲ್ಲಿ ಸಿಎಲ್-11ಸಿ ಸನ್ನದು ಸ್ಥಳ ಆರಿಸುವಾಗ ಸ್ಥಳೀಯ ಶಾಸಕರ ಹಾಗೂ ಜನಪ್ರತಿನಿಧಿಗಳ ಅಭಿಪ್ರಾಯಕ್ಕೆ ಮನ್ನಣೆ ನೀಡಬೇಕೆಂಬ ಸೂಚನೆಯನ್ನು ಸರ್ಕಾರದ ಪತ್ರ ಸಂಖ್ಯೆ: ಆಇ 22 ಇಎಫ್‌ಎಲ್ 2019, ದಿನಾಂಕ:30.03.2020 ರಲ್ಲಿ ಕೈಬಿಡುವಂತೆ ನಿರ್ದೇಶಿಸಲಾಗಿರುತ್ತದೆ. |

...2

| ಆ) | ಹಾಗಿದ್ದಲ್ಲಿ, ಈ ಹಿಂದೆ ಮಳಿಗೆಗಳನ್ನು ಶಾಸಕರು ಸೂಚಿಸಿದ ಸ್ಥಳಗಳಲ್ಲಿ ತೆರೆಯಲಾಗುತ್ತಿದ್ದು, ಈ ಬಾರಿ ಇಲಾಖೆಯ ವರದಿ ಮೇಲೆ ಮಳಿಗೆಗಳನ್ನು ಪ್ರಾರಂಭ ಮಾಡುವುದು ಸಾರ್ವಜನಿಕ ಹಿತದೃಷ್ಟಿಯಿಂದ ಸರಿಯಾದ ಕ್ರಮವೇ? (ವಿವರ ನೀಡುವುದು) | ಎಂ.ಎಸ್.ಐ.ಎಲ್ ಸಂಸ್ಥೆಯವರಿಗೆ ಸಿಎಲ್-11ಸಿ ಸನ್ನದು ಮಂಜೂರು ಮಾಡುವ ಪೂರ್ವದಲ್ಲಿ ಉದ್ದೇಶಿತ ಸನ್ನದು ಸ್ಥಳವು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967 ರ ನಿಯಮ 5 ರಡಿಯಲ್ಲಿ ಆಕ್ಷೇಪಣಾ ರಹಿತ ಸ್ಥಳದಲ್ಲಿದೆಯೇ/ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪಿನಿಂದ ಮುಕ್ತವಾಗಿರುತ್ತದೆಯೇ? ಹಾಗೂ ಸದರಿ ಸನ್ನದು ಮಂಜೂರಾತಿ ಕುರಿತು ಸಾರ್ವಜನಿಕರಿಂದಾಗಲೀ ಅಥವಾ ಸ್ಥಳೀಯ ಶಾಸಕರಿಂದಾಗಲೀ ಯಾವುದಾದರೂ ದೂರುಗಳು ಸ್ವೀಕೃತವಾಗಿರುತ್ತದೆಯೇ? ದೂರು ದಾಖಲಾಗಿದ್ದಲ್ಲಿ, ದೂರುದಾರರಿಗೆ ಹಿಂಬರಹ ನೀಡಲಾಗಿದೆಯೇ ಎಂಬ ಬಗ್ಗೆ ದೃಢಪಡಿಸಿಕೊಂಡ ನಂತರದಲ್ಲಿಯೇ ಸಿಎಲ್-11ಸಿ ಸನ್ನದುಗಳನ್ನು ಮಂಜೂರು ಮಾಡಲು ಪೂರ್ವಾನುಮತಿ ನೀಡಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಆಇ 106 ಇಎಲ್‌ಕ್ಯೂ 2020

(ಹೆಚ್.ನಾಗೇಶ್)
ಅಬಕಾರಿ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ: ಒಇ 79 ಪಿಇಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ:08-12-2020.

43
5/8/12/2020

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭಾ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ** : ಶ್ರೀ ಭೀಮಾ ನಾಯ್ಕ್ ಎಸ್ (ಹಗರಿಬೊಮ್ಮನಹಳ್ಳಿ) ಮಾನ್ಯ ವಿಧಾನ ಸಭಾ ಸದಸ್ಯರು ಅವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 371ಕ್ಕೆ ಉತ್ತರವನ್ನು ಒದಗಿಸುವ ಬಗ್ಗೆ.

*****

ಶ್ರೀ ಭೀಮಾ ನಾಯ್ಕ್ ಎಸ್ (ಹಗರಿಬೊಮ್ಮನಹಳ್ಳಿ) ಮಾನ್ಯ ವಿಧಾನ ಸಭಾ ಸದಸ್ಯರು ಅವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 371ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

Banadarangaiah N.R.
**(ಬಾಣದರಂಗಯ್ಯ ಎನ್.ಆರ್.)** 08/12/20
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಎ).

**ಪ್ರತಿ:**

1. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ ಅವರ ಆಪ್ತ ಕಾರ್ಯದರ್ಶಿ.
2. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಪಿಸಿಎಎಸ್), ಒಳಾಡಳಿತ ಇಲಾಖೆ.
3. ಸರ್ಕಾರದ ಉಪ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಸೇವೆಗಳು) ಅವರ ಆಪ್ತ ಸಹಾಯಕರು.
4. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ಒಳಾಡಳಿತ ಇಲಾಖೆ.
5. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿ.

## ಕರ್ನಾಟಕ ವಿಧಾನಸಭೆ

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 371
2 ಸದಸ್ಯರ ಹೆಸರು : ಶ್ರೀ ಭೀಮಾ ನಾಯ್ಕ್ ಎಸ್ (ಹಗರಿಬೊಮ್ಮನಹಳ್ಳಿ),
3 ಉತ್ತರಿಸುವ ದಿನಾಂಕ : 08.12.2020
4 ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಹಗರಿಬೊಮ್ಮನಹಳ್ಳಿ ಠಾಣೆಯ ವೃತ್ತ ನಿರೀಕ್ಷಕರ ಕರ್ತವ್ಯ ನಿರ್ಲಕ್ಷ್ಯದಿಂದ ಕ್ಷೇತ್ರದಲ್ಲಿ ಅಕ್ರಮ ಚಟುವಟಿಕೆಗಳು ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಗರಿಬೊಮ್ಮನಹಳ್ಳಿ ವೃತ್ತ ವ್ಯಾಪ್ತಿಯಲ್ಲಿ ಅಕ್ರಮ ಚಟುವಟಿಕೆಗಳ ಮಾಹಿತಿಯನ್ನು ಕಾಲಕಾಲಕ್ಕೆ ಸಂಗ್ರಹಿಸಿ, ದಾಳಿ ಮಾಡಿ 2020ನೇ ಸಾಲಿನಲ್ಲಿ ಅಕ್ರಮ ಜೂಜಾಟ, ಮಟ್ಕಾ ಮತ್ತು ಅಕ್ರಮ ಮರಳು ಗಣಿಗಾರಿಕೆ, ಅಕ್ರಮ ಮದ್ಯ ಮಾರಾಟ ಇತರೆ (ಗಾಂಜಾ) ಎನ್.ಡಿ.ಪಿ.ಎಸ್. ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ. |

| ಸಿಪಿಐ ಹಗರಿಬೊಮ್ಮನಹಳ್ಳಿ ವೃತ್ತ | ಪಿ.ಎಸ್.ಐ ಹಗರಿಬೊಮ್ಮನಹಳ್ಳಿ | ಪಿ.ಎಸ್.ಐ. ತಂಬ್ರಹಳ್ಳಿ ಠಾಣೆ |
|---|---|---|
| 27 | 43 | 35 |
| ಒಟ್ಟು 105 | | |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಸದರಿ ವೃತ್ತ ನಿರೀಕ್ಷಕರು ವಾಸ್ತವ ಪರಿಸ್ಥಿತಿಯನ್ನು ಅವಲೋಕಿಸದೇ ರಾಜಕೀಯ ಒತ್ತಡಕ್ಕೆ ಮಣಿದು ಏಕಪಕ್ಷೀಯವಾಗಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಸಾರ್ವಜನಿಕರಿಗೆ ತೊಂದರೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಾನ್ಯ ಶಾಸಕರಾದ ಶ್ರೀ ಭೀಮಾ ನಾಯ್ಕ ಎಸ್. ರವರು ಹಗರಿಬೊಮ್ಮನಹಳ್ಳಿ ಠಾಣೆಯ ವೃತ್ತ ನಿರೀಕ್ಷಕರ ವಿರುದ್ಧ ಸಲ್ಲಿಸಲಾಗಿದ್ದ ದೂರು ಅರ್ಜಿಯು ಪ್ರಸ್ತುತ ವಿಚಾರಣಾ ಹಂತದಲ್ಲಿರುತ್ತದೆ. |
| ಇ) | ಸದರಿ ಅಧಿಕಾರಿಯ ವಿರುದ್ಧ ಈಗಾಗಲೇ ದೂರು ಸಲ್ಲಿಸಲಾಗಿದ್ದು, ಪ್ರಸ್ತುತ ದೂರಿನ ವಿಚಾರಣೆ ಯಾವ ಹಂತದಲ್ಲಿದೆ? | |

ಸಂಖ್ಯೆ: ಒಇ 79 ಪಿಇಎಂ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

# ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 135 ಎಂಎನ್‌ಐ 2020

ಕರ್ನಾಟಕ ಸರ್ಕಾರ ಸಚಿವಾಲಯ
ವಿಕಾಸ ಸೌಧ
ಬೆಂಗಳೂರು, ದಿನಾಂಕ: 08-12-2020.

69
Q/S
8/12/2020

**ಇಂದ**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ
ವಿಕಾಸಸೌಧ, ಬೆಂಗಳೂರು.

**ಇವರಿಗೆ.**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:373 ಕ್ಕೆ ಉತ್ತರ ಒದಗಿಸುವ ಬಗ್ಗೆ.

ಉಲ್ಲೇಖ: ಸಂಖ್ಯೆ:ಪ್ರಶಾವಿಸ/15ನೇವಿಸ/8ಅ/ಪ್ರ.ಸಂ.373/2020, ದಿನಾಂಕ: 30-09-2020.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭೆಯ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:373 ಕ್ಕೆ ಸಂಬಂಧಿಸಿದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

ಕೆ.ಎಸ್. [signature]
(ಕೆ.ಎಸ್. ಜಗದೀಶರೆಡ್ಡಿ)
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 373 |
| ಸದಸ್ಯರ ಹೆಸರು | : | ಶ್ರೀ ಹ್ಯಾರಿಸ್.ಎನ್.ಎ (ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | : | **08.12.2020** |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕಾರ್ಯಕ್ಷಮತೆ ಯಲ್ಲಿನ ಪ್ರಗತಿಯ ಎರಡು ವರ್ಷಗಳ ಯೋಜನ ಅನುಷ್ಠಾನಗಳಾವುವು; (ವಿವರ ನೀಡುವುದು) | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕಾರ್ಯಕ್ಷಮತೆಯಲ್ಲಿನ ಪ್ರಗತಿಯ ಅನುಷ್ಠಾನಗಳು ಈ ಕೆಳಕಂಡಂತಿವೆ:<br>**1. ತ್ಯಾಜ್ಯ ನೀರು ನಿರ್ವಾಹಣೆ ವಲಯದಲ್ಲಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನ ಗೊಳಿಸಲಾಗಿದೆ.**<br>• ಮೈಸೂರು ರಸ್ತೆ ರಂಗನಾಥ ಕಾಲೋನಿಯಿಂದ ವೃಷಭಾವತಿ ತ್ಯಾಜ್ಯ ನೀರಿನ ಘಟಕದವರೆಗೂ ತ್ಯಾಜ್ಯ ನೀರು ಸಾಗಿಸುವ 1.60 ಕಿ.ಮೀ ಉದ್ದದ ಹಳೆಯ ಕೊಳವೆ ಮಾರ್ಗವನ್ನು ಹೆಚ್ಚಿನ ಗಾತ್ರಕ್ಕೆ ಬದಲಾಯಿಸುವ ಕಾಮಗಾರಿಯನ್ನು 52.45 ಕೋಟಿ ರೂಗಳ ಮೊತ್ತದಲ್ಲಿ ಕೈಗೊಂಡು ಪೂರ್ಣಮಾಡಲಾಗಿದೆ.<br>• ಸಾರಕ್ಕಿ ಕೆರೆಯ ಬಳಿ ದಿನಂಪ್ರತಿ 5 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯ ನೀರು ಸಂಸ್ಕರಣ ಘಟಕವನ್ನು 14.49 ಕೋಟಿ ರೂಗಳ ಮೊತ್ತದಲ್ಲಿ ಕೈಗೊಳ್ಳಲಾಗಿದೆ. ಈ ಕಾಮಗಾರಿಯನ್ನು ನವೆಂಬರ್ 2019ರಲ್ಲಿ ಪೂರ್ಣಮಾಡಿ ಕಾರ್ಯಚಾಲನೆ ಮಾಡಲಾಗಿದೆ.<br>• ಚಿಕ್ಕಬೇಗೂರು ಕೆರೆಯ ಬಳಿ ದಿನಂಪ್ರತಿ 5 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯ ನೀರು ಸಂಸ್ಕರಣ ಘಟಕವನ್ನು 13.89 ಕೋಟಿ ರೂಗಳ ಮೊತ್ತದಲ್ಲಿ ಕೈಗೊಳ್ಳಲಾಗಿದೆ. ಈ ಕಾಮಗಾರಿಯನ್ನು ಆಗಸ್ಟ್ 2020 ರಲ್ಲಿ ಪೂರ್ಣಮಾಡಿ ಕಾರ್ಯಚಾಲನೆ ಮಾಡಲಾಗಿದೆ.<br>• ಹುಳಿಮಾವು ಕೆರೆಯ ಬಳಿ ದಿನಂಪ್ರತಿ 10 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯ ನೀರು ಸಂಸ್ಕರಣ ಘಟಕವನ್ನು 20.25 ಕೋಟಿ ರೂಗಳ ಮೊತ್ತದಲ್ಲಿ ಕೈಗೊಳ್ಳಲಾಗಿದೆ. ಈ ಕಾಮಗಾರಿಯನ್ನು ಮಾರ್ಚ್ 2020 ರಲ್ಲಿ ಪೂರ್ಣಮಾಡಿ ಕಾರ್ಯಚಾಲನೆ ಮಾಡಲಾಗಿದೆ.<br>• ಅಗರ ಕೆರೆಯ ಬಳಿ ದಿನಂಪ್ರತಿ 35 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯ ನೀರು ಸಂಸ್ಕರಣ ಘಟಕವನ್ನು 53.63 ಕೋಟಿ ರೂಗಳ ಮೊತ್ತದಲ್ಲಿ ಕೈಗೊಳ್ಳಲಾಗಿದೆ. ಈ ಕಾಮಗಾರಿಯನ್ನು ಮಾರ್ಚ್ 2020 ರಲ್ಲಿ ಪೂರ್ಣಮಾಡಿ ಕಾರ್ಯಚಾಲನೆ ಮಾಡಲಾಗಿದೆ.<br>• ಕೋರಮಂಗಲ ಕ್ರೀಡಾ ಸಂಕೀರ್ಣದ ಬಳಿ 210 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯ ನೀರಿನ ರೇಚಕ ಯಂತ್ರಗಳ ಸ್ಥಾವರ (I.S.P.S) ಈ ಕಾಮಗಾರಿಯನ್ನು 38.50 ಕೋಟಿ ಮೊತ್ತದಲ್ಲಿ ಕೈಗೊಂಡಿದ್ದು ಹಾಗೂ ಸೆಪ್ಟೆಂಬರ್ 2020 ರಲ್ಲಿ |

ಪೂರ್ಣಮಾಡಿ ಕಾರ್ಯಚಾಲನೆ ಮಾಡಲಾಗಿದೆ.

- ಕೆ.ಆರ್.ಪುರಂ ಬಳಿ ದಿನಂಪ್ರತಿ 20 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯ ನೀರು ಸಂಸ್ಕರಣ ಘಟಕಗವನ್ನು ಅಮೃತ್ ಯೋಜನೆಯಡಿಯಲ್ಲಿ 28.39 ಕೋಟಿ ರೂಗಳ ಮೊತ್ತದಲ್ಲಿ ಕೈಗೊಳ್ಳಲಾಗಿದೆ. ಈ ಕಾಮಗಾರಿಯು ಪೂರ್ಣಗೊಂಡಿದ್ದು ಕಾರ್ಯಚಾಲನೆಯಲ್ಲಿರುತ್ತದೆ.
- ದೊಡ್ಡಬೆಲೆ ಬಳಿ 40 ದಶಲಕ್ಷ ಲೀಟರ್ ಸಾಮರ್ಥ್ಯದ ತ್ಯಾಜ್ಯ ನೀರು ಸಂಸ್ಕರಣ ಘಟಕವನ್ನು 73.93 ಕೋಟಿ ರೂಗಳ ಮೊತ್ತದಲ್ಲಿ ಕೈಗೊಳ್ಳಲಾಗಿದೆ. ಈ ಕಾಮಗಾರಿಯನ್ನು ನವೆಂಬರ್ 2019ರಲ್ಲಿ ಪೂರ್ಣಮಾಡಿ ಕಾರ್ಯಚಾಲನೆ ಮಾಡಲಾಗಿದೆ.

2. <u>ತಿಪ್ಪಗೊಂಡನಹಳ್ಳಿ ಜಲಾಶಯವನ್ನು ಮೊದಲನೇ ಹಂತದಲ್ಲಿ ಪುನಃಶ್ಚೇತನ ಮಾಡುವ ಕಾಮಗಾರಿ</u>

ಸರ್ಕಾರವು ಕೈಗೆತ್ತಿಕೊಂಡಿರುವ ಎತ್ತಿನಹೊಳೆ ಯೋಜನೆಯಡಿಯಲ್ಲಿ 2.5 ಟಿಎಂಸಿ (1.7 ಟಿಎಂಸಿ ನೀರನ್ನು ತಿಪ್ಪಗೊಂಡನಹಳ್ಳಿ ಜಲಾಶಯಕ್ಕೆ ಮತ್ತು 0.8 ಟಿಎಂಸಿ ಹೆಸರುಘಟ್ಟ ಜಲಾಶಯಕ್ಕೆ) ಹಂಚಿಕೆ ಮಾಡಿರುತ್ತದೆ. ತಿಪ್ಪಗೊಂಡನಹಳ್ಳಿ ಜಲಾಶಯದಿಂದ ಎತ್ತಿನಹೊಳೆ ನೀರನ್ನು ಬೆಂಗಳೂರಿಗೆ ಪೂರೈಸಲು ತಿಪ್ಪಗೊಂಡನಹಳ್ಳಿ ಜಲಾಶಯವನ್ನು ಹಾಗೂ ಶುದ್ದ ನೀರು ಶುದ್ದೀಕರಣ ಘಟಕಗಳ ಮೊದಲನೇ ಹಂತದಲ್ಲಿ ಪುನಃಶ್ಚೇತನ ಮಾಡುವ ಕಾಮಗಾರಿಗೆ ಸರ್ಕಾರದ ಆದೇಶ ಸಂಖ್ಯೆ. UDD 50 MNI 2019 ದಿನಾಂಕ:28.02.2019 ರಲ್ಲಿ ಅನುಮೋದನೆ ನೀಡಲಾಗಿದೆ. ಅಲ್ಲದೇ ದಿನಾಂಕ: 06.03.2019 ರಂದು ಮಾನ್ಯ ಉಪಮುಖ್ಯಮಂತ್ರಿಗಳು ಸದರಿ ಕಾಮಾಗಾರಿಗಳಿಗೆ ಚಾಲನೆ ನೀಡಿದ್ದಾರೆ. ಪ್ರಸ್ತುತ ಕಾಮಗಾರಿ ಪ್ರಗತಿಯಲ್ಲಿದೆ.

3. **<u>110 ಹಳ್ಳಿಗಳಿಗೆ ಕುಡಿಯುವ ನೀರು ಮತ್ತು ಒಳಚರಂಡಿ (ಲ್ಯಾಟರಲ್ಸ್) ವ್ಯವಸ್ಥೆ ಕಲ್ಪಿಸುವ ಯೋಜನೆ</u>**

**110 ಹಳ್ಳಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸುವ ಯೋಜನೆ:**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಹೊಸದಾಗಿ ಸೇರ್ಪಡೆಯಾಗಿರುವ 110 ಹಳ್ಳಿಗಳ ಕುಡಿಯುವ ನೀರಿನ ಯೋಜನೆ ಮತ್ತು ಲೆಕ್ಕಕ್ಕೆ ಸಿಗದ ನೀರಿನ ನಿಯಂತ್ರಣ ಯೋಜನೆಯನ್ನು ರೂ.1500 ಕೋಟಿ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲು ಸರ್ಕಾರವು ಅನುಮೋದನೆಯನ್ನು ನೀಡಿರುತ್ತದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಹೊಸದಾಗಿ ಸೇರ್ಪಡೆಯಾಗಿರುವ 110 ಹಳ್ಳಿಗಳ ಕುಡಿಯುವ ನೀರಿನ ಯೋಜನೆಯ (225 ಚಕಿಮೀ) ಕಾಮಗಾರಿಗಳನ್ನು ಬೊಮ್ಮನಹಳ್ಳಿ, ಆರ್.ಆರ್ ನಗರ, ದಾಸರಹಳ್ಳಿ, ಬ್ಯಾಟರಾಯನಪುರ ಮತ್ತು ಮಹದೇವಪುರ ಎಂದು 5 ವಲಯಗಳಾಗಿ ವಿಂಗಡಿಸಿ, ಲೆಕ್ಕಕ್ಕೆ ಸಿಗದ ನೀರಿನ ನಿಯಂತ್ರಣ ಯೋಜನೆ, 5 ವಲಯಗಳಲ್ಲಿ ನೆಲಮಟ್ಟದ ಜಲಸಂಗ್ರಹಾಗಾರ ಹಾಗೂ ಮೇಲ್ಮಟ್ಟದ ನೀರು ಸಂಗ್ರಹಣಾ ಕಾಮಗಾರಿಗಳಿಗೆ ಹಾಗೂ ಇವುಗಳನ್ನು ಸೂಪರ್‌ವೈಸ್ ಮಾಡಲು ಕನ್ಸಲ್ಟನ್ಸಿಯನ್ನು ದರಖಾಸ್ತು ಪ್ರಕ್ರಿಯೆಯ ಮೂಲಕ ಒಟ್ಟು ರೂ.1365.41 ಕೋಟಿಗಳಿಗೆ ನೀಡಲಾಗಿದ್ದು, ಕಾಮಗಾರಿಗಳು ಪ್ರಗತಿಯಲ್ಲಿವೆ 2020ರ

ಅಂತ್ಯಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿದೆ. ಒಟ್ಟಾರೆಯಾಗಿ ಅಕ್ಟೋಬರ್ 2020ರ ಅಂತ್ಯಕ್ಕೆ 2809.70 ಕಿಮೀಗಳಲ್ಲಿ 2760.75 ಕಿಮೀನಷ್ಟು ಭೌತಿಕ ಪ್ರಗತಿ ಹಾಗೂ 1099.71 ಕೋಟಿಗಳಷ್ಟು ಆರ್ಥಿಕ ಪ್ರಗತಿಯಾಗಿರುತ್ತದೆ.

**110 ಹಳ್ಳಿಗಳಿಗೆ ಒಳಚರಂಡಿ (ಲ್ಯಾಟರಲ್ಸ್) ವ್ಯವಸ್ಥೆ ಕಲ್ಪಿಸುವ ಯೋಜನೆ:**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿರುವ 110 ಹಳ್ಳಿಗಳಿಗೆ ರೂ.1000 ಕೋಟಿ ಅಂದಾಜು ವೆಚ್ಚದ ಒಳಚರಂಡಿ (ಲ್ಯಾಟರಲ್ಸ್) ಕಲ್ಪಿಸುವ ಯೋಜನೆಗೆ ತನ್ನ ಸರ್ಕಾರದ ಆದೇಶ ಸಂಖ್ಯೆ:ನಅಇ 174 ಎಂಎನ್‌ಐ 2017 ಬೆಂಗಳೂರು ದಿನಾಂಕ: 07.11.2017 ರಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಹೊಸದಾಗಿ ಸೇರ್ಪಡೆಯಾಗಿರುವ 110 ಹಳ್ಳಿಗಳಿಗೆ ಒಳಚರಂಡಿ (ಲ್ಯಾಟರಲ್ಸ್) ಕಲ್ಪಿಸುವ (225 ಚಕಿಮೀ) ಯೋಜನೆಯ ಕಾಮಗಾರಿಗಳನ್ನು ಬ್ಯಾಟರಾಯನಪುರ & ಮಹದೇವಪುರ, ಆರ್.ಆರ್. ನಗರ & ದಾಸರಹಳ್ಳಿ ಹಾಗೂ ಬೊಮ್ಮನಹಳ್ಳಿ ಎಂದು 3 ವಲಯಗಳಾಗಿ ವಿಂಗಡಿಸಿ ದರಖಾಸ್ತು ಪ್ರಕ್ರಿಯೆ ಮೂಲಕ ಮಾರ್ಚ್ 2018ರಲ್ಲಿ ಒಟ್ಟು ರೂ.925.06 ಕೋಟಿಗಳಿಗೆ ಗುತ್ತಿಗೆದಾರರಿಗೆ ವಹಿಸಲಾಗಿದೆ. ಈ ಕಾಮಗಾರಿಯನ್ನು ಮಾರ್ಚ್ 2018 ಪ್ರಾರಂಭಿಸಲಾಗಿದ್ದು, ಮಾರ್ಚ್ 2021ರ ಅಂತ್ಯಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿದೆ. ಒಟ್ಟಾರೆ ಅಕ್ಟೋಬರ್ 2020ರ ಅಂತ್ಯಕ್ಕೆ 1568 ಕಿಮೀಗಳಲ್ಲಿ 1002 ಕಿಮೀನಷ್ಟು ಭೌತಿಕ ಪ್ರಗತಿ ಹಾಗೂ ರೂ.417.96 ಕೋಟಿಗಳಷ್ಟು ಆರ್ಥಿಕ ಪ್ರಗತಿಯಾಗಿರುತ್ತದೆ.

**4. ಕೊಳಚೆ ಪ್ರದೇಶಗಳಲ್ಲಿ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ವಾಸಿಸುವ ನಿವಾಸಿಗಳಿಗೆ ಉಚಿತವಾಗಿ 10,000ಲೀಟರ್ ನೀರು ಸರಬರಾಜು ಮಾಡುವ ಬಗ್ಗೆ:-**

ಸರ್ಕಾರವು ಬೆಂಗಳೂರು ನಗರದ ಕೊಳಚೆ ಪ್ರದೇಶದಲ್ಲಿರುವ 81076 ಸಂಪರ್ಕಗಳಿಗೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕಾಲೋನಿಯಲ್ಲಿನ 26397 ಸಂಪರ್ಕಗಳಿಗೆ ಪ್ರತಿ ತಿಂಗಳು 10,000 ಲೀಟರ ಯೋಜನೆಗೆ ನೀರನ್ನು ಉಚಿತವಾಗಿ ಸರಬರಾಜು ಮಾಡಲಾಗುತ್ತಿದ್ದು, ಸರ್ಕಾರದಿಂದ ವಾರ್ಷಿಕ ರೂ.1837.00 ಲಕ್ಷಗಳನ್ನು ಅನುದಾನವನ್ನು ನಿಗದಿಪಡಿಸಲಾಗಿದ್ದು, ಸದರಿ ಮೊತ್ತವನ್ನು ಉಚಿತವಾಗಿ ನೀರು ಸರಬರಾಜು ಮಾಡಲು ಉಪಯೋಗಿಸಿಕೊಳ್ಳಲಾಗುತ್ತಿದೆ.

**5. ಲೆಕ್ಕಕ್ಕೆ ಸಿಗದ ನೀರಿನ ಪ್ರಮಾಣವನ್ನು ಕಡಿತಗೊಳಿಸಲು (ಯು.ಎಫ್.ಡಬ್ಲ್ಯೂ) ಕೈಗೊಂಡಿರುವ ಕಾಮಗಾರಿ**

ಬೆಂಗಳೂರು ಜಲಮಂಡಳಿಯ ಉತ್ತರ-2, ಉತ್ತರ-3, ಕೇಂದ್ರ-2 ಹಾಗೂ ದಕ್ಷಿಣ-ಪೂರ್ವ-2 ಉಪವಿಭಾಗಗಳ ವ್ಯಾಪ್ತಿಯ 22.0 ಚ.ಕಿ.ಮೀ ವ್ಯಾಪ್ತಿಯಲ್ಲಿ ನೀರು ಸೋರುವಿಕೆ ತಡೆಗಟ್ಟುವ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗಿದೆ. ಕಾಮಗಾರಿಯು ಈಗಾಗಲೇ ಪ್ರಾರಂಭವಾಗಿದ್ದು ಇಲ್ಲಿಯವರೆಗೆ 180ಕಿ.ಮೀ ಕೊಳವೆಮಾರ್ಗಗಳನ್ನು

| | | |
|---|---|---|
| | | ಅಳವಡಿಸಲಾಗಿದ್ದು, ಉಳಿದ ಪ್ರದೇಶದಲ್ಲಿ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.<br>ಈಗಾಗಲೇ 26 ಡಿ.ಎಂ.ಎ. ಗಳ ಪೈಕಿ 6 ಡಿ.ಎಂ.ಎ. ಗಳಲ್ಲಿ ಕಾಮಗಾರಿ ಪೂರ್ಣಗೊಂಡಿರುತ್ತದೆ. ಮುಂದುವರೆದಂತೆ, ಸಿಜೆಎಫ್, ಮಲ್ಲೇಶ್ವರಂ ನಲ್ಲಿ 25 ಎಂ.ಎಲ್. ಸಾಮರ್ಥ್ಯದ ಹೊಸದಾದ ಟೂ ಟೈರ್ ಆರ್.ಸಿ.ಸಿ. ಜಲಗಾರವನ್ನು ನಿರ್ಮಿಸುವ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.<br><br>**6. ಮಳೆ ನೀರು ಕೊಯ್ಲು ಪದ್ಧತಿ**<br>ಬೆಂಗಳೂರು ನಗರದಲ್ಲಿರುವ ಕಟ್ಟಡಗಳಿಗೆ ಮಳೆ ನೀರು ಕೊಯ್ಲು ಪದ್ಧತಿ ಅಳವಡಿಸಿಕೊಳ್ಳಲು ಬಿ.ಬಿ.ಎಂ.ಪಿ. ವ್ಯಾಪ್ತಿಯಲ್ಲಿ ಬರುವ 60'x40' ಚದರ ಅಡಿ ಹಾಗೂ ಅದಕ್ಕಿಂತ ಮೇಲ್ಪಟ್ಟು ವಿಸ್ತೀರ್ಣವುಳ್ಳ ನಿವೇಶನದಲ್ಲಿ ಈಗಾಗಲೇ ಕಟ್ಟಡವನ್ನು ನಿರ್ಮಿಸಿದವರಿಗೆ ಮತ್ತು ಹೊಸದಾಗಿ ಕಟ್ಟಡವನ್ನು 30'x40' ಮತ್ತು ಹಾಗೂ ಅದಕ್ಕಿಂತ ಮೇಲ್ಪಟ್ಟು ವಿಸ್ತೀರ್ಣದಲ್ಲಿ ನಿರ್ಮಿಸಿದ್ದರೆ ಕಡ್ಡಾಯವಾಗಿ ಮಳೆ ನೀರು ಕೊಯ್ಲು ಅಳವಡಿಸಬೇಕೆಂದು ಬೆಂಗಳೂರು ಮಂಡಳಿ ಕಾಯ್ದೆ ಸೆಕ್ಷನ್ 72(ಎ) ಗೆ ಆಗಸ್ಟ್ 2009ರಲ್ಲಿ ತಿದ್ದುಪಡಿ ತರಲಾಗಿರುತ್ತದೆ. ಈ ಪದ್ಧತಿಯನ್ನು ಅಳವಡಿಸಿಕೊಳ್ಳದೆ ಇರುವ ಕಟ್ಟಡಗಳಿಗೆ ಮಾಹೆಯಾನ ಬಿಲ್ಲಿನಲ್ಲಿ ಹೆಚ್ಚುವರಿಯಾಗಿ ದಂಡವನ್ನು ವಿಧಿಸಲಾಗುತ್ತಿರುತ್ತದೆ.<br><br>**7. ತ್ಯಾಜ್ಯ ನೀರು ಸಂಸ್ಕರಣಾ ಘಟಕಗಳೊಂದಿಗೆ ಉಭಯ ಕೊಳವೆಗಳನ್ನು ಅಳವಡಿಸುವುದು:**<br>ಅಧಿಸೂಚನೆ ಸಂಖ್ಯೆ ಬೆಂಜಮಂ/ಮುಆಅ-ಕಾ/4138/2015-16 ದಿ.25.02.2016 ರಲ್ಲಿ ಬೆಂಗಳೂರು ಒಳಚರಂಡಿ ವಿನಿಯಮಗಳು, 1974 "4ಎ" ಪ್ರಕಾರ ತ್ಯಾಜ್ಯ ನೀರು ಸಂಸ್ಕರಣಾ ಘಟಕಗಳನ್ನು ಉಭಯ ಕೊಳವೆ ವ್ಯವಸ್ಥೆಯೊಂದಿಗೆ ಈ ಕೆಳಕಂಡ ಕಟ್ಟಡಗಳ ಅಳವಡಿಸಿಕೊಳ್ಳಲು ಕಡ್ಡಾಯ ಮಾಡಲಾಗಿರುತ್ತದೆ.<br>ಎ) 20 ಮತ್ತು ಮೇಲ್ಪಟ್ಟು ಅಥವಾ 2000 ಚದರ ಮೀಟರ್ ಮತ್ತು ಮೇಲ್ಪಟ್ಟು ನಿರ್ಮಾಣದ<br>ಪ್ರದೇಶದ ಗೃಹ ಸಮುಚ್ಚಯ ಕಟ್ಟಡಗಳಿಗೆ<br>ಬಿ) 2000 ಚದರ ಮೀಟರ್ ಮತ್ತು ಮೇಲ್ಪಟ್ಟ ನಿರ್ಮಾಣದ ಪ್ರದೇಶದ ಗೃಹೇತರ ಕಟ್ಟಡಗಳಿಗೆ<br>ಸಿ) 5000 ಚದರ ಮೀಟರ್ ಮತ್ತು ಮೇಲ್ಪಟ್ಟ ನಿರ್ಮಾಣದ ಪ್ರದೇಶದ ವಿದ್ಯಾಸಂಸ್ಥೆ ಕಟ್ಟಡಗಳಿಗೆ. |
| ಆ. | ಎರಡು ವರ್ಷಗಳಲ್ಲಿ ಅನುಷ್ಠಾನಗೊಳಿಸಿದ ಮಂಡಳಿಯ ಯೋಜನೆಗಳಿಗಾಗಿ ಮಾಡಿದ ವೆಚ್ಚ ಮತ್ತು ಹಮ್ಮಿಕೊಂಡಿರುವ ನೂತನ ಕ್ರಿಯಾ ಯೋಜನೆಗಳು ಯಾವುವು; | **1. ತ್ಯಾಜ್ಯ ನೀರು ನಿರ್ವಾಹಣೆ ವಲಯದಲ್ಲಿ ಎರಡು ವರ್ಷಗಳಲ್ಲಿ ಅನುಷ್ಠಾನಗೊಳಿಸಿದ ಯೋಜನೆಗಳಿಗೆ ಒಟ್ಟು ವೆಚ್ಚಮಾಡಿದ ಮೊತ್ತ ರೂ.295.53 ಕೋಟಿಗಳು:.**<br>ಈ ವಲಯದಲ್ಲಿ ಹಮ್ಮಿಕೊಂಡಿರುವ ನೂತನ ಕ್ರಿಯಾ ಯೋಜನೆಗಳ ವಿವರಗಳು ಕೆಳಕಂಡಂತಿದೆ<br>• ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧಿಕರಣದ ಆದೇಶದ ಮೇರೆಗೆ ಹಳೆಯ ತ್ಯಾಜ್ಯ ನೀರು ಶುದ್ಧೀಕರಣ ಘಟಕಗಳ ಉನ್ನತೀಕರಣ ಕಾಮಗಾರಿಗಳನ್ನು ಕೈಗೊಳ್ಳುವ ಅವಶ್ಯಕತೆಯಿದೆ. ಪ್ರಾರಂಭದಲ್ಲಿ ಬೆಳ್ಳಂದೂರು ಮತ್ತು ವರ್ತೂರು ಕೆರೆಯ ಮಾಲಿನ್ಯವನ್ನು ತಡೆಗಟ್ಟಲು ಕೋರಮಂಗಲ ಮತ್ತು ಚಲ್ಲಘಟ್ಟ ಕಣಿವೆಯಲ್ಲಿರುವ ಹಳೆಯ ತ್ಯಾಜ್ಯ ನೀರಿನ ಶುದ್ಧೀಕರಣ ಘಟಕಗಳ ಉನ್ನತೀಕರಣ ಕಾಮಗಾರಿಗಳನ್ನು |

ಕೈಗೊಳ್ಳಲಾಗುವುದು. ಈ ಯೋಜನೆಗೆ ವಿಸ್ತೃತ ಯೋಜನಾ ವರದಿ ತಯಾರಿಸಲು ಸಮಾಲೋಚಕರನ್ನು ನೇಮಿಸಲಾಗಿದೆ. ಶೀಘ್ರದಲ್ಲೇ ಈ ಯೋಜನೆಗೆ ಟೆಂಡರ್ ಕರೆಯಲಾಗುವುದು ಹಾಗೂ ಈ ಯೋಜನೆಯನ್ನು ಎರಡು ವರ್ಷಗಳಲ್ಲಿ ಅನುಷ್ಠಾನಗೊಳಿಸಲು ಯೋಜಿಸಲಾಗಿದೆ.

- ಪ್ರಸ್ತುತ ಚಾಲನೆಯಲ್ಲಿರುವ ತ್ಯಾಜ್ಯ ನೀರು ಸಂಸ್ಕರಣಾ ಘಟಕಗಳನ್ನು ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧೀಕರಣದ (1069/2018) ರ ಆದೇಶದಂತೆ ಉನ್ನತೀಕರಿಸಲು ಅಂದಾಜು ಮೊತ್ತವು 1500 ಕೋಟಿಗಳೆಂದು ಅಂದಾಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ: ನಅಇ 96 ಎಂಎನ್‌ಐ 2020 ದಿನಾಂಕ: 27.10.2020ರಂದು 4ಜಿ ವಿನಾಯಿತಿಗೆ ಅನುಮತಿ ಪಡೆದು ಮೆ. ಭಾರತೀಯ ವಿಜ್ಞಾನ ಸಂಸ್ಥೆಯವರಿಗೆ ಕಾರ್ಯ ಸಾಧ್ಯತೆ ವರದಿಯನ್ನು ತಯಾರಿಸಲು ಕಾರ್ಯಾದೇಶವನ್ನು ನೀಡಲಾಗಿರುತ್ತದೆ. ಸದರಿ ಸಂಸ್ಥೆಯಿಂದ ವರದಿ ಬಂದ ನಂತರ ನುರಿತ ಸಮಾಲೋಚಕರಿಂದ ಸಂಕ್ಷಿಪ್ತವಾದ ಯೋಜನಾ ವರದಿಯನ್ನು ಬೆಂಗಳೂರು ಜಲಮಂಡಳಿಯಿಂದ ತಯಾರಿಸಲು ಕ್ರಮವಹಿಸಲಾಗುವುದು.
- ಹೆಬ್ಬಾಳದ ಬಳಿ ಇರುವ ಹಳೆಯ 60 ಎಂ.ಎಲ್.ಡಿ ತ್ಯಾಜ್ಯ ನೀರು ಸಂಸ್ಕರಣಾ ಘಟಕದ ಬದಲು ಹೊಸದಾಗಿ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗುವುದು. ಪ್ರಸ್ತುತ ಈ ಯೋಜನೆಗೆ ವಿಸ್ತೃತ ಯೋಜನಾ ವರದಿ ತಯಾರಿಸಲು ಸಮಾಲೋಚಕರನ್ನು ನೇಮಿಸಲಾಗಿದೆ.
- ಹೊರಮಾವು ಬಳಿ 60 ಎಂ.ಎಲ್.ಡಿ ಹೊಸ ತ್ಯಾಜ್ಯ ನೀರು ಸಂಸ್ಕರಣಾ ಘಟಕದ ನಿರ್ಮಾಣದ ಕಾಮಗಾರಿಯನ್ನು ಕೈಗೊಳ್ಳಲಾಗುವುದು. ಪ್ರಸ್ತುತ ಈ ಯೋಜನೆಗೆ ವಿಸ್ತೃತ ಯೋಜನಾ ವರದಿ ತಯಾರಿಸಲು ಸಮಾಲೋಚಕರನ್ನು ನೇಮಿಸಲು ದರಕಾಸ್ತು ಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ.

**2. ಲೆಕ್ಕಕ್ಕೆ ಸಿಗದ ನೀರಿನ ಪ್ರಮಾಣವನ್ನು ಕಡಿತಗೊಳಿಸಲು (ಯು.ಎಫ್.ಡಬ್ಲ್ಯೂ) ಕೈಗೊಂಡಿರುವ ಕಾಮಗಾರಿ:**

ಬೆಂಗಳೂರು ಜಲಮಂಡಳಿಯ ಉತ್ತರ-2, ಉತ್ತರ-3, ಕೇಂದ್ರ-2 ಹಾಗೂ ದಕ್ಷಿಣ-ಪೂರ್ವ-2 ಉಪವಿಭಾಗಗಳ ವ್ಯಾಪ್ತಿಯ 22.0 ಚ.ಕಿ.ಮೀ ವ್ಯಾಪ್ತಿಯಲ್ಲಿ ನೀರು ಸೋರುವಿಕೆ ತಡೆಗಟ್ಟುವ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲಾಗಿದೆ. ಕಾಮಗಾರಿಯು ಈಗಾಗಲೇ ಪ್ರಾರಂಭವಾಗಿದ್ದು ಇಲ್ಲಿಯವರೆಗೆ 180ಕಿ.ಮೀ ಕೊಳವೆಮಾರ್ಗಗಳನ್ನು ಅಳವಡಿಸಲಾಗಿದ್ದು, ಉಳಿದ ಪ್ರದೇಶದಲ್ಲಿ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.
ಈಗಾಗಲೇ 26 ಡಿ.ಎಂ.ಎ. ಗಳ ಪೈಕಿ 6 ಡಿ.ಎಂ.ಎ. ಗಳಲ್ಲಿ ಕಾಮಗಾರಿ ಪೂರ್ಣಗೊಂಡಿರುತ್ತದೆ. ಮುಂದುವರೆದಂತೆ, ಸಿಜೆಎಫ್, ಮಲ್ಲೇಶ್ವರಂ ನಲ್ಲಿ 25 ಎಂ.ಎಲ್. ಸಾಮರ್ಥ್ಯದ ಹೊಸದಾದ ಟೂ ಟೈರ್ ಆರ್.ಸಿ.ಸಿ. ಜಲಗಾರವನ್ನು ನಿರ್ಮಿಸುವ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.

| | | 3. ತಿಪ್ಪಗೊಂಡನಹಳ್ಳಿ ಜಲಾಶಯವನ್ನು ಮೊದಲನೇ ಹಂತದಲ್ಲಿ ಪುನಃಶ್ಚೇತನ ಮಾಡುವ ಕಾಮಗಾರಿ:<br><br>ಸರ್ಕಾರವು ಕೈಗೆತ್ತಿಕೊಂಡಿರುವ ಎತ್ತಿನಹೊಳೆ ಯೋಜನೆಯಡಿಯಲ್ಲಿ 2.5 ಟಿಎಂಸಿ (1.7 ಟಿಎಂಸಿ ನೀರನ್ನು ತಿಪ್ಪಗೊಂಡನಹಳ್ಳಿ ಜಲಾಶಯಕ್ಕೆ ಮತ್ತು 0.8 ಟಿಎಂಸಿ ಹೆಸರುಘಟ್ಟ ಜಲಾಶಯಕ್ಕೆ) ಹಂಚಿಕೆ ಮಾಡಿರುತ್ತದೆ. ತಿಪ್ಪಗೊಂಡನಹಳ್ಳಿ ಜಲಾಶಯದಿಂದ ಎತ್ತಿನಹೊಳೆ ನೀರನ್ನು ಬೆಂಗಳೂರಿಗೆ ಪೂರೈಸಲು ತಿಪ್ಪಗೊಂಡನಹಳ್ಳಿ ಜಲಾಶಯವನ್ನು ಹಾಗೂ ಶುದ್ಧ ನೀರು ಶುದ್ಧೀಕರಣ ಘಟಕಗಳ ಮೊದಲನೇ ಹಂತದಲ್ಲಿ ಪುನಃಶ್ಚೇತನ ಮಾಡುವ ಕಾಮಗಾರಿಗೆ ಸರ್ಕಾರದ ಆದೇಶ ಸಂಖ್ಯೆ. UDD 50 MNI 2019 ದಿನಾಂಕ:28.02.2019 ರಲ್ಲಿ ಅನುಮೋದನೆ ನೀಡಿದೆ. ದಿನಾಂಕ: 06.03.2019 ರಂದು ಮಾನ್ಯ ಉಪಮುಖ್ಯಮಂತ್ರಿಗಳು ಸದರಿ ಕಾಮಾಗಾರಿಗಳಿಗೆ ಚಾಲನೆ ನೀಡಿದ್ದಾರೆ. ಪ್ರಸ್ತುತ ಕಾಮಗಾರಿ ಪ್ರಗತಿಯಲ್ಲಿದೆ.<br><br>**4. 110 ಹಳ್ಳಿಗಳಿಗೆ ಕುಡಿಯುವ ನೀರು ಮತ್ತು ಒಳಚರಂಡಿ (ಲ್ಯಾಟರಲ್ಸ್) ವ್ಯವಸ್ಥೆ ಕಲ್ಪಿಸುವ ಯೋಜನೆ:**<br>**110 ಹಳ್ಳಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸುವ ಯೋಜನೆ:**<br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಹೊಸದಾಗಿ ಸೇರ್ಪಡೆಯಾಗಿರುವ 110 ಹಳ್ಳಿಗಳ ಕುಡಿಯುವ ನೀರಿನ ಯೋಜನೆ ಮತ್ತು ಲೆಕ್ಕಕ್ಕೆ ಸಿಗದ ನೀರಿನ ನಿಯಂತ್ರಣ ಯೋಜನೆಯನ್ನು ರೂ.1500 ಕೋಟಿ ವೆಚ್ಚದಲ್ಲಿ ಕೈಗೆತ್ತಿಕೊಳ್ಳಲು ಸರ್ಕಾರವು ಅನುಮೋದನೆಯನ್ನು ನೀಡಿರುತ್ತದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಹೊಸದಾಗಿ ಸೇರ್ಪಡೆಯಾಗಿರುವ 110 ಹಳ್ಳಿಗಳ ಕುಡಿಯುವ ನೀರಿನ ಯೋಜನೆಯ (225 ಚಕಿಮೀ) ಕಾಮಗಾರಿಗಳನ್ನು ಬೊಮ್ಮನಹಳ್ಳಿ, ಆರ್.ಆರ್ ನಗರ, ದಾಸರಹಳ್ಳಿ, ಬ್ಯಾಟರಾಯನಪುರ ಮತ್ತು ಮಹದೇವಪುರ ಎಂದು 5 ವಲಯಗಳಾಗಿ ವಿಂಗಡಿಸಿ, ಲೆಕ್ಕಕ್ಕೆ ಸಿಗದ ನೀರಿನ ನಿಯಂತ್ರಣ ಯೋಜನೆ, 5 ವಲಯಗಳಲ್ಲಿ ನೆಲಮಟ್ಟದ ಜಲಸಂಗ್ರಹಾಗಾರ ಹಾಗೂ ಮೇಲ್ಮಟ್ಟದ ನೀರು ಸಂಗ್ರಹಣಾ ಕಾಮಗಾರಿಗಳಿಗೆ ಹಾಗೂ ಇವುಗಳನ್ನು ಸೂಪರ್‌ವೈಸ್ ಮಾಡಲು ಕನ್ಸಲ್ಟನ್ಸಿಯನ್ನು ದರಖಾಸ್ತು ಪ್ರಕ್ರಿಯೆಯ ಮೂಲಕ ಒಟ್ಟು ರೂ.1365.41 ಕೋಟಿಗಳಿಗೆ ನೀಡಲಾಗಿದ್ದು, ಕಾಮಗಾರಿಗಳು ಪ್ರಗತಿಯಲ್ಲಿವೆ 2020ರ ಅಂತ್ಯಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿದೆ. ಒಟ್ಟಾರೆಯಾಗಿ ಅಕ್ಟೋಬರ್ 2020ರ ಅಂತ್ಯಕ್ಕೆ 2809.70 ಕಿಮೀಗಳಲ್ಲಿ 2760.75 ಕಿಮೀನಷ್ಟು ಭೌತಿಕ ಪ್ರಗತಿ ಹಾಗೂ 1099.71 ಕೋಟಿಗಳಷ್ಟು ಆರ್ಥಿಕ ಪ್ರಗತಿಯಾಗಿರುತ್ತದೆ.<br>**110 ಹಳ್ಳಿಗಳಿಗೆ ಒಳಚರಂಡಿ (ಲ್ಯಾಟರಲ್ಸ್) ವ್ಯವಸ್ಥೆ ಕಲ್ಪಿಸುವ ಯೋಜನೆ:**<br>ಸರ್ಕಾರವು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಸೇರಿರುವ 110 ಹಳ್ಳಿಗಳಿಗೆ ರೂ.1000 ಕೋಟಿ ಅಂದಾಜು ವೆಚ್ಚದ ಒಳಚರಂಡಿ (ಲ್ಯಾಟರಲ್ಸ್) ಕಲ್ಪಿಸುವ ಯೋಜನೆಗೆ ಸರ್ಕಾರದ ಆದೇಶ ಸಂಖ್ಯೆ:ನಅಇ 174 ಎಂಎನ್‌ಐ 2017 ಬೆಂಗಳೂರು ದಿನಾಂಕ: |
|---|---|---|

| | | |
|---|---|---|
| | | 07.11.2017 ರಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿರುತ್ತದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಹೊಸದಾಗಿ ಸೇರ್ಪಡೆಯಾಗಿರುವ 110 ಹಳ್ಳಿಗಳಿಗೆ ಒಳಚರಂಡಿ (ಲ್ಯಾಟರಲ್ಸ್) ಕಲ್ಪಿಸುವ (225 ಚಕಿಮೀ) ಯೋಜನೆಯ ಕಾಮಗಾರಿಗಳನ್ನು ಬ್ಯಾಟರಾಯನಪುರ & ಮಹದೇವಪುರ, ಆರ್.ಆರ್. ನಗರ & ದಾಸರಹಳ್ಳಿ ಹಾಗೂ ಬೊಮ್ಮನಹಳ್ಳಿ ಎಂದು 3 ವಲಯಗಳಾಗಿ ವಿಂಗಡಿಸಿ ದರಖಾಸ್ತು ಪ್ರಕ್ರಿಯೆ ಮೂಲಕ ಮಾರ್ಚ್ 2018ರಲ್ಲಿ ಒಟ್ಟು ರೂ.925.06 ಕೋಟಿಗಳಿಗೆ ಗುತ್ತಿಗೆದಾರರಿಗೆ ವಹಿಸಲಾಗಿದೆ. ಈ ಕಾಮಗಾರಿಯನ್ನು ಮಾರ್ಚ್ 2018 ಪ್ರಾರಂಭಿಸಲಾಗಿದ್ದು, ಮಾರ್ಚ್ 2021ರ ಅಂತ್ಯಕ್ಕೆ ಪೂರ್ಣಗೊಳಿಸಲು ಯೋಜಿಸಲಾಗಿದೆ. ಒಟ್ಟಾರೆ ಅಕ್ಟೋಬರ್ 2020ರ ಅಂತ್ಯಕ್ಕೆ 1568 ಕಿಮೀಗಳಲ್ಲಿ 1002 ಕಿಮೀನಷ್ಟು ಭೌತಿಕ ಪ್ರಗತಿ ಹಾಗೂ ರೂ.417.96 ಕೋಟಿಗಳಷ್ಟು ಆರ್ಥಿಕ ಪ್ರಗತಿಯಾಗಿರುತ್ತದೆ. |
| ಇ. | ಬೆಂಗಳೂರು ಮಹಾನಗರಕ್ಕೆ ಬೇಕಾಗುವ ತ್ಯಾಜ್ಯ ಸಂಸ್ಕರಣಾ ಘಟಕಗಳು ಮತ್ತು ಪ್ರಸ್ತುತ ಇರುವ ಘಟಕಗಳ ನಿರ್ಮಾಣ ಹಂತದಲ್ಲಿರುವ ಘಟಕಗಳಾವುವು; (ವಿವರ ನೀಡುವುದು) | ಬೆಂಗಳೂರು ನಗರಕ್ಕೆ ಸರಬರಾಜು ಆಗುತ್ತಿರುವ ನೀರಿನ ಅನುಗುಣವಾಗಿ ಒಟ್ಟು 1440 ಎಂ.ಎಲ್.ಡಿ ಸಾಮರ್ಥ್ಯದ ತ್ಯಾಜ್ಯ ನೀರು ಶುದ್ಧೀಕರಣ ಘಟಕಗಳ ಅವಶ್ಯಕತೆ ಇದೆ. ಪ್ರಸ್ತುತ ಚಾಲ್ತಿಯಲ್ಲಿರುವ 32 ಘಟಕಗಳ ಒಟ್ಟು ಸಾಮರ್ಥ್ಯ 1182.50 ಎಂ.ಎಲ್.ಡಿ. ಇವುಗಳ ವಿವರ ಕೆಳಕಂಡಂತೆ ಇದೆ. |

| ಕ್ರಮ ಸಂಖ್ಯೆ | ಸಂಸ್ಕರಣಘಟಕದ ಸ್ಥಳ | ಸಂಸ್ಕರಣ ಘಟಕದ ಸಾಮರ್ಥ್ಯ ದಿನಂಪ್ರತಿ ದಶ ಲಕ್ಷ ಲೀಟರ್‌ಗಳಲ್ಲಿ |
|---|---|---|
| 1 | ವೃಷಭಾವತಿಕಣಿವೆ | 180 |
| 2 | ಕೋರಮಂಗಲ ಮತ್ತು ಚಲ್ಲಘಟ್ಟ ಕಣಿವೆ | 218 |
| 3 | ಕೋರಮಂಗಲ ಮತ್ತು ಚಲ್ಲಘಟ್ಟ ಕಣಿವೆ | 30 |
| 4 | ಹೆಬ್ಬಾಳ | 60 |
| 5 | ಮಲ್ಲತಹಳ್ಳಿ | 5 |
| 6 | ಕೆಂಪಾಂಭುದಿ | 1 |
| 7 | ಯಲಹಂಕ | 10 |
| 8 | ಮೈಲಸಂದ್ರ | 75 |
| 9 | ನಾಗಸಂದ್ರ | 20 |
| 10 | ಜಕ್ಕೂರು | 15 |
| 11 | ಕೆ. ಆರ್. ಪುರಂ | 20 |
| 12 | ಕಾಡಬೀಸನ ಹಳ್ಳಿ | 50 |
| 13 | ರಾಜಾಕೆನಾಲ್ | 40 |
| 14 | ಕಬ್ಬನ್ ಪಾರ್ಕ್ | 4 |
| 15 | ಲಾಲ್ ಬಾಗ್ | 1.5 |
| 16 | ಕೋರಮಂಗಲ ಮತ್ತುಚಲ್ಲಘಟ್ಟಕಣಿವೆ | 60 |
| 17 | ರಾಜಾಕೆನಾಲ್ | 40 |
| 18 | ನಾಗಸಂದ್ರ | 20 |
| 19 | ಚಿಕ್ಕಬಾಣಾವರ | 5 |

